CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೮, ೨೦೦೫ (ಜೇಷ್ಠ ೧೮, ಶಕ ವರ್ಷ ೧೯೨೭) | ಸಂಚಿಕೆ ೨೩ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಅಮೃತಕುಮಾರ್ ಸಾಲಂಕಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು (ಹಾಲಿ ಈ ಇಲಾಖೆಯಲ್ಲಿ ಸ್ಥಳ ನಿರೀಕ್ಷಣೆಯಲ್ಲಿ) ಮತ್ತು ಶ್ರೀ ವಿ.ಜೆ. ರಾಯ್ಕರ್ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ರಾಯಚೂರು ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಅಥಣಿ ಇವರುಗಳ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು, ಸೇವೆಯಿಂದ ಅಮಾನತ್ತಿನಲ್ಲಿರಿಸುವ ಬಗ್ಗೆ - ಆದೇಶ.

**ಓದಲಾಗಿದೆ:** ಮುಕಾನಿಅ:ಜಿಪಂ:ರಾಯಚೂರು ಇವರ ಪತ್ರ ಸಂಖ್ಯೆ: ಜಿಪರಾ:ಸಿಸಿಎ:15:2004-2005, ದಿನಾಂಕ: 18.2.2005.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 5 ಇಎನ್‌ಕ್ಯೂ 2005, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2005**

ಮೇಲೆ ಓದಲಾದ ದಿನಾಂಕ: 18.02.2005ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು 2003-04ನೇ ಸಾಲಿನಲ್ಲಿ ರಾಯಚೂರು ತಾಲ್ಲೂಕಿನಲ್ಲಿ 9 ಉರ್ದು ಶಾಲಾ ಕೊಠಡಿಗಳನ್ನು ನಿರ್ಮಾಣ ಮಾಡಲು ರೂ.13.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ಶಾಲಾ ಕೊಠಡಿಗಳ ನಿರ್ಮಾಣದ ಬಗ್ಗೆ ಪರಿಶೀಲನೆ ಮಾಡಲಾಗಿ ಯಾವುದೇ ಕಾಮಗಾರಿಗಳನ್ನು ಕೈಗೊಳ್ಳದಿದ್ದರೂ ಸಹ, ಶ್ರೀ ಅಬ್ದುಲ್ ನಬಿ, ಕಿರಿಯ ಇಂಜಿನಿಯರ್, (ವಿಶೇಷ ದರ್ಜೆ) ಮತ್ತು ಪ್ರಭಾರಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಇವರು ಕಾಮಗಾರಿಗಳ ಅಳತೆ ಪರಿಶೀಲನೆಯನ್ನು ಮಾಡಿರುವುದಾಗಿ ಹಾಗೂ ರೂ.13.50 ಲಕ್ಷಗಳನ್ನು ಖರ್ಚು ಮಾಡಿದ ಬಗ್ಗೆ ಹಣ ಬಳಕೆಯ ಪತ್ರವನ್ನು ನೀಡಿರುತ್ತಾರೆ.

ಕಾಮಗಾರಿಗಳನ್ನು ಕೈಗೊಳ್ಳದೆ, ಕಾಮಗಾರಿಗಳ ಅಳತೆ ಪರಿಶೀಲನಾ ವರದಿ ಮತ್ತು ಹಣ ಬಳಕೆ ಪತ್ರವನ್ನು ನೀಡಿರುವುದು, ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ನಿಯಮಗಳ ಉಲ್ಲಂಘನೆ ಮಾಡಿರುವ ಬಗ್ಗೆ ಅವರಿಗೆ ಸಿಸಿಎ ನಿಯಮಗಳ ಪ್ರಕಾರ ಏಕೆ ಶಿಸ್ತಿನ ಕ್ರಮ ಕೈಗೊಳ್ಳಬಾರದೆಂದು ಅವರಿಗೆ ನೋಟೀಸ್ ನೀಡಲಾಗಿತ್ತು. ಕಾರಣ ಕೇಳುವ ನೋಟೀಸ್‌ಗೆ ಅವರು ಸದರಿ ಶಾಲಾ ಕಟ್ಟಡಗಳ ಕಾಮಗಾರಿಗಳಿಗೆ ಬಿಡುಗಡೆಯಾದ ಅನುದಾನವನ್ನು ದಿನಾಂಕ: 31.3.2004 ರೊಳಗೆ ಉಪಯೋಗಿಸಬೇಕಾಗಿದ್ದು, ಸದರಿ ಅನುದಾನವನ್ನು ಶ್ರೀ ವಿ.ಜೆ. ರಾಯ್ಕರ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಇವರು 9 ಉರ್ದು ಶಾಲಾ ಕೊಠಡಿಗಳ ನಿರ್ಮಾಣಕ್ಕೆ ಉಪಯೋಗಿಸದೆ ಇತರೆ 10 ಕಾಮಗಾರಿಗಳಿಗೆ ಉಪಯೋಗಿಸಿದ್ದಾರೆಂದು ತಿಳಿಸಿರುತ್ತಾರೆ. ಸದರಿ ವಿವರಗಳನ್ನು ಪರಿಶೀಲಿಸಿ, ಹಣ ಬಳಕೆ ಪ್ರಮಾಣ ಪತ್ರವನ್ನು ತಾನು ನೀಡಿರುವುದಾಗಿ ವಿವರಣೆಯಲ್ಲಿ ಶ್ರೀ ಅಬ್ದುಲ್ ನಬಿ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಇವರು ತಿಳಿಸಿರುವುದಾಗಿ, 9 ಉರ್ದು ಶಾಲಾ ಕೊಠಡಿಗಳ ಕಾಮಗಾರಿಗಾಗಿ ಬಿಡುಗಡೆ ಮಾಡಿದ ಹಣ ರೂ.13.50 ಲಕ್ಷಗಳನ್ನು ಬೇರೆ ಕಾಮಗಾರಿಗಳಿಗೆ ಉಪಯೋಗಿಸಿದ್ದರೂ ಸಹ ಶ್ರೀ ಅಬ್ದುಲ್ ನಬಿ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಪ್ರಭಾರಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ಸದರಿ ಹಣವನ್ನು 9 ಉರ್ದು ಶಾಲಾ ಕೊಠಡಿಗಳ ಕಾಮಗಾರಿ ನಿರ್ಮಾಣಕ್ಕಾಗಿ ಉಪಯೋಗಿಸಲಾಗಿದೆ ಎಂದು, ಅಳತೆ ತಪಾಸಣೆಯನ್ನು ಮಾಡಿದಂತೆ ಸುಳ್ಳು ಹಣ ಬಳಕೆ ಪ್ರಮಾಣ ಪತ್ರ ನೀಡಿದ್ದರೆಂದು ವರದಿ ಮಾಡಿದ್ದರು.

ಸದರಿ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿದೆ ಎಂದು ಕಂಡುಬಂದಿದ್ದರಿಂದ, ಶ್ರೀ ಅಬ್ದುಲ್ ನಬಿ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಪ್ರಭಾರಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಮೇಲಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಲು ಸಹ ಶಿಫಾರಸ್ಸು ಮಾಡಿದ್ದರು.

ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರ ವರದಿಯನ್ನು ಪರಿಶೀಲಿಸಲಾಗಿದೆ. ಅವರ ಶಿಫಾರಸ್ಸಿನಂತೆ ಶ್ರೀ ಅಬ್ದುಲ್ ನಬಿ, ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಪ್ರಭಾರಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರು ದಿನಾಂಕ: 28.2.2005 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿದ್ದರಿಂದ, ಈಗ ಇವರನ್ನು ಅಮಾನತ್ತುಗೊಳಿಸಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ, ಅವರ ಮೇಲಿನ ಆರೋಪಗಳ ಬಗ್ಗೆ ಅವರ ಮೇಲೆ ಕೆಸಿಎಸ್ಆರ್ ನಿಯಮ 214 ರಂತೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಈ ಪ್ರಕರಣದಲ್ಲಿ ಶ್ರೀ ಅಮೃತಕುಮಾರ್ ಸಾಲಂಕಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಹಾಲಿ ಈ ಇಲಾಖೆಯಲ್ಲಿ ಸ್ಥಳ ನಿರೀಕ್ಷಣೆಯಲ್ಲಿರುವ ಮತ್ತು ಶ್ರೀ ವಿ.ಜೆ. ರಾಯ್ಕರ್ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಅಥಣಿ ಇವರುಗಳು ತಮ್ಮ ಕರ್ತವ್ಯದಲ್ಲಿ ತೀವ್ರ ದುರ್ನಡತೆ ಹಾಗೂ ಸರ್ಕಾರಿ ಬೊಕ್ಕಸಕ್ಕೆ ನಷ್ಟವೆಸಗಿದ್ದಾರೆಂಬುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಮತ್ತು ಇವರು ಎಸೆಗಿರುವ ಕರ್ತವ್ಯ ಲೋಪವು ಅವರು ಹೊಂದಿರುವ ಜವಾಬ್ದಾರಿಯುತ ಹುದ್ದೆಗೆ ಸಂಬಂಧಿಸಿರುವುದರಿಂದ ಮತ್ತು ಇದು ಅವರ ಕರ್ತವ್ಯಗಳ ನಿರ್ವಹಣೆಯಲ್ಲಿ ಅವರನ್ನು ಇಕ್ಕಟ್ಟಿಗೆ ಸಿಕ್ಕಿಸುವಂಥದ್ದಾಗಿರುತ್ತದೆ.

ವಿಷಯ, ಸಂದರ್ಭ, ಸನ್ನಿವೇಶಗಳನ್ನು ಮತ್ತು ಈಗ ಒದಗಿಬಂದ ದಾಖಲೆಗಳನ್ನು ಪರಿಗಣಿಸಲಾಗಿ ಶ್ರೀ ಅಮೃತಕುಮಾರ್ ಸಾಲಂಕಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು, ಹಾಲಿ ಈ ಇಲಾಖೆಯಲ್ಲಿ ಸ್ಥಳ ನಿರೀಕ್ಷಣೆಯಲ್ಲಿರುವ ಇವರನ್ನು ಮತ್ತು ಶ್ರೀ ವಿ.ಜೆ. ರಾಯ್ಕರ್ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಅಥಣಿ ಇವರುಗಳ ವಿರುದ್ಧ ಶಿಸ್ತಿನ ಕ್ರಮವನ್ನು ಕೈಗೊಳ್ಳಲು ಅವಲೋಕಿಸಿರುವುದರಿಂದಲೂ; ಮತ್ತು ಇವರನ್ನು ಅಮಾನತ್ತಿನಲ್ಲಿಡುವುದು ಅಪೇಕ್ಷಣೀಯವೆಂದು ಸರ್ಕಾರವು ಅಭಿಪ್ರಾಯಪಟ್ಟಿರುತ್ತದೆ.

ಆದ್ದರಿಂದ, ಈಗ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ ನಿಯಂತ್ರಣ ಮತ್ತು ಅಪೀಲು) ನಿಯಮಗಳು, 1957ರ 10ನೇ ನಿಯಮದ 1(ಡಿ) ಉಪ-ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಅಮೃತಕುಮಾರ್ ಸಾಲಂಕಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಹಾಲಿ ಈ ಇಲಾಖೆಯಲ್ಲಿ ಸ್ಥಳ ನಿರೀಕ್ಷಣೆಯಲ್ಲಿರುವ ಇವರನ್ನು ಮತ್ತು ಶ್ರೀ ವಿ.ಜೆ.ರಾಯ್ಕರ್ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು, ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಅಥಣಿ ಇವರುಗಳ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಇವರುಗಳನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶಿಸಿದೆ.

ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಸದರಿ ಅಧಿಕಾರಿಗಳಿಗೆ ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು. ಅಮಾನತ್ತಿನಲ್ಲಿಟ್ಟಿರುವ ಅವಧಿಯಲ್ಲಿ ಸದರಿ ಅಧಿಕಾರಿಗಳು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೆ ತಮ್ಮ ಕಛೇರಿ ಇರುವ ಸ್ಥಳವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 571

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಕೆ.ಆರ್. ಈಶ್ವರಯ್ಯ, ಅಂದಿನ ಪಂಪ್ ಆಪರೇಟರ್ ಯಾಂತ್ರಿಕ ಉಪವಿಭಾಗ, ಗುಲ್ಬರ್ಗಾ ಇವರ ಅಮಾನತ್ತಿನ ಅವಧಿಗೆ ಸಕ್ರಮಗೊಳಿಸಲು ರಜೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 119 ಇನಕ್ಯೂ 96 ದಿನಾಂಕ: 31.07.1997.
2) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 119 ಇನಕ್ಯೂ 96 ದಿನಾಂಕ: 05.02.1998.
3) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 119 ಇನಕ್ಯೂ 96 ದಿನಾಂಕ: 11.02.1998.
4) ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 119 ಇನಕ್ಯೂ 96 ದಿನಾಂಕ: 31.12.1999.
5) ಶ್ರೀ ಕೆ.ಆರ್. ಈಶ್ವರಯ್ಯ ಇವರ ಮನವಿ ದಿನಾಂಕ: 26.10.2004.

**ಪ್ರಸ್ತಾವನೆ:**

ಪ್ರಧಾನ ಇಂಜಿನಿಯರ್, ಅಂದಿನ ಪಬ್ಲಿಕ್ ಹೆಲ್ತ್ ಇಂಜಿನಿಯರಿಂಗ್ ವಿಭಾಗ ಇವರು ದಿನಾಂಕ: 30.01.97 ಮತ್ತು 16.06.97 ರಲ್ಲಿ ಸರ್ಕಾರಕ್ಕೆ ಪತ್ರ ಬರೆದು, ಗುಲ್ಬರ್ಗಾ ಯಾಂತ್ರಿಕ ಉಪ ವಿಭಾಗದಲ್ಲಿ ಕಾರ್ಯನಿರತವಾಗಿದ್ದ 11 ರಿಗ್ ಯಂತ್ರಗಳ ನಿರ್ವಹಣೆಯಲ್ಲಿ ಕೆಲವು ಅಧಿಕಾರಿ : ನೌಕರರುಗಳು ಡೀಸಲ್ ಮತ್ತು ಆಯಿಲ್‌ಗಳನ್ನು ನಿಗದಿಪಡಿಸಿದ್ದಕ್ಕಿಂತ ಹೆಚ್ಚಾಗಿ ಬಳಸಿ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿದ್ದರೆಂಬ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಸರ್ಕಾರಕ್ಕೆ ವರದಿ ಸಲ್ಲಿಸಿದ್ದರು. ಈ ಪ್ರಕರಣದಲ್ಲಿ ಒಳಗೊಂಡ ಅಧಿಕಾರಿ : ನೌಕರರುಗಳ ಪೈಕಿ ಶ್ರೀ ಕೆ.ಆರ್. ಈಶ್ವರಯ್ಯ ಅಂದಿನ ಪಂಪ್ ಆಪರೇಟರ್ ಇವರನ್ನು ಒಳಗೊಂಡಂತೆ ಸಂಬಂಧಪಟ್ಟವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಅಮಾನತ್ತುಗೊಳಿಸಿ ನಂತರ ಇವರುಗಳ ಮೇಲಿನ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮುಖ್ಯ ಇಂಜಿನಿಯರ್, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾ ಇವರನ್ನು ವಿಚಾರಣಾ ಅಧಿಕಾರಿಯನ್ನಾಗಿ ನೇಮಿಸಲಾಗಿತ್ತು. ತದನಂತರ ಇವರ ಅಮಾನತ್ತನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ತೆರವುಗೊಳಿಸಲಾಗಿತ್ತು.

ಪ್ರಕರಣದ ಇಲಾಖೆ ವಿಚಾರಣಾ ವರದಿಯ ನಂತರ ಸರ್ಕಾರವು ಪರಿಶೀಲಿಸಿ ಸಂಬಂಧಪಟ್ಟ ಅಧಿಕಾರಿ : ನೌಕರರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ವಸೂಲು ಮಾಡುವ ದಂಡನೆ ವಿಧಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ಆದೇಶ ಹೊರಡಿಸಿರುತ್ತದೆ.

ಶ್ರೀ ಕೆ.ಆರ್. ಈಶ್ವರಯ್ಯ ಅಂದಿನ ಪಂಪ್ ಆಪರೇಟರ್ ಇವರು ಮನವಿ ಸಲ್ಲಿಸಿ ಅವರು ಅಮಾನತ್ತಿನಲ್ಲಿ ಕಳೆದ ದಿನಾಂಕ: 19.8.1997 ರಿಂದ 12.2.1998 (ಉಭಯ ದಿನಗಳು ಸೇರಿ) ಅವಧಿಗೆ ತಮ್ಮ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಿ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ: 26.10.2004ರ ಮನವಿಯಲ್ಲಿ ಕೋರಿದ್ದರು.

ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 221 ಜಿಪಅ 2004, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ.ಆರ್. ಈಶ್ವರಯ್ಯ ಅಂದಿನ ಪಂಪ್ ಆಪರೇಟರ್, ಯಾಂತ್ರಿಕ ಉಪ ವಿಭಾಗ, ಗುಲ್ಬರ್ಗಾ ಇವರು ದಿನಾಂಕ: 19.8.1997 ರಿಂದ 12.2.1998 (ಎರಡು ದಿನ ಸೇರಿ) ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 100(7)ರ ಅಡಿಯಲ್ಲಿನ ಪ್ರಾವಿಸೋನಂತೆ ಅವರ ಹಕ್ಕಿನಲ್ಲಿರುವ ಪರಿವರ್ತಿತ ರಜೆಯನ್ನು ಮಂಜೂರು ಮಾಡಿ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸಿ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ. ಸಂಖ್ಯೆ: ಗ್ರಾಅಪ:265:ಆಂಆಸೇ:04, ದಿ: 12.3.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 572

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಗದಗ ಜಿಲ್ಲೆ, ಶಿರಹಟ್ಟಿ ತಾಲ್ಲೂಕು, ಶಿಗ್ಲಿ ಗ್ರಾಮ ಪಂಚಾಯಿತಿಯಲ್ಲಿ 10ನೇ ಹಣಕಾಸು ಅನುದಾನದಲ್ಲಿನ ಹಣದ ದುರುಪಯೋಗಕ್ಕೆ ಸಂಬಂಧಿಸಿದಂತೆ ಶ್ರೀ ಎಸ್.ಪಿ. ಮಠದ, ಹಿಂದಿನ ಕಾರ್ಯದರ್ಶಿ, (ನಿವೃತ್ತ) ಗ್ರಾಮ ಪಂಚಾಯತ್, ಶಿಗ್ಲಿ ಮತ್ತು ಪಿ.ಎಸ್. ಇನಾಂದಾರ್, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಶಿರಹಟ್ಟಿ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ದಂಡನೆ ವಿಧಿಸುವ ಬಗ್ಗೆ - ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರ ಪತ್ರ ಸಂಖ್ಯೆ: ಜಿಪಂಗ:ಗ್ರಾಪಂ:ಸಿಆರ್: 2001-02:6678, ದಿನಾಂಕ: 22.11.2001.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ ಇವರ ಪತ್ರ ಸಂಖ್ಯೆ: ಜಿಪಂಗ:ಗ್ರಾಪಂ:ಸಿಆರ್: 2001-02:465, ದಿನಾಂಕ: 15.5.2002.
3. ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 46 ಜಿಪಅ 02, ದಿನಾಂಕ: 21.9.2002.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 46 ಜಿಪಅ 02, ದಿನಾಂಕ: 24.2.2003.
5. ವಿಚಾರಣಾಧಿಕಾರಿಗಳ ದಿನಾಂಕ: 19.4.2004ರ ವಿಚಾರಣಾ ವರದಿ.
6. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 46 ಜಿಪಅ 2002, ದಿನಾಂಕ: 26.5.2004.
7. ಶ್ರೀ ಪಿ.ಎಸ್. ಇನಾಂದಾರ್, ಅಂದಿನ ಕಿರಿಯ ಇಂಜಿನಿಯರ್, ಇವರ ಲಿಖಿತ ಹೇಳಿಕೆ. ದಿನಾಂಕ: 23.8.2004.
8. ಶ್ರೀ ಎಸ್.ಪಿ ಮಠದ, ಅಂದಿನ ಗ್ರಾಮ ಪಂಚಾಯತ್ ಕಾರ್ಯದರ್ಶಿ (ನಿವೃತ್ತ), ಶಿಗ್ಲಿ ಇವರ ಲಿಖಿತ ಹೇಳಿಕೆ ದಿನಾಂಕ: 30.9.2004.
9. ಸರ್ಕಾರಿ ಪತ್ರ ಸಮ ಸಂಖ್ಯೆ: ದಿನಾಂಕ: 23.11.2004.
10. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ:99: ಸಿಎನ್‌ಎಸ್:04, ದಿನಾಂಕ: 4.3.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1) ಮತ್ತು (2)ರ ಪತ್ರದಲ್ಲಿ ಗದಗ ಜಿಲ್ಲೆಯ ಶಿರಹಟ್ಟಿ ತಾ. ಶಿಗ್ಲಿ ಗ್ರಾ.ಪಂ. ಯಲ್ಲಿ 10ನೇ ಹಣಕಾಸು ಆಯೋಗದ ಅನುದಾನದ ಕಾಮಗಾರಿಗಳಲ್ಲಿನ ಅಕ್ರಮಕ್ಕೆ ಸಂಬಂಧಿಸಿದಂತೆ ಶ್ರೀ ಎಸ್.ಪಿ. ಮಠದ, ಅಂದಿನ ಪಂಚಾಯತಿ ಕಾರ್ಯದರ್ಶಿ (ನಿವೃತ್ತ) ಗ್ರಾಮ ಪಂಚಾಯತ್, ಶಿಗ್ಲಿ ಮತ್ತು ಶ್ರೀ ಪಿ.ಎಸ್. ಇನಾಂದಾರ್, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಶಿರಹಟ್ಟಿ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ದೋಷಾರೋಪಣಾ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿದ್ದರು. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಎಸ್.ಪಿ. ಮಠದ, ಅಂದಿನ ಪಂಚಾಯಿತಿ ಕಾರ್ಯದರ್ಶಿ (ನಿವೃತ್ತ) ಮತ್ತು ಶ್ರೀ ಪಿ.ಎಸ್. ಇನಾಂದಾರ್, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಶಿರಹಟ್ಟಿ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ರೆಡ್ ವಿತ್ 13ರ ರೀತ್ಯ ಜಂಟಿ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 21.9.2002 ರಂದು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಲಾಗಿತ್ತು. ಆಪಾದಿತರು ತಮಗೆ ಜಾರಿಗೊಳಿಸಿದ ಆರೋಪಪಟ್ಟಿಯನ್ನು ಸ್ವೀಕರಿಸಿದ್ದರೂ ಸಹ ಯಾವುದೇ ಹೇಳಿಕೆಗಳನ್ನು ಸಲ್ಲಿಸದ ಕಾರಣ, ಆಪಾದಿತರ ಮೇಲಿನ ಆಪಾದನೆಗಳ ಸತ್ಯಾ ಸತ್ಯತೆಯನ್ನರಿಯಲು ವಿವರವಾದ ವಿಚಾರಣೆ ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಗದಗ್ ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ: 24.2.2003ರ ಆದೇಶದಲ್ಲಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಗದಗ್, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪ್ರಕಾರ ಸರ್ಕಾರಕ್ಕೆ ವರದಿ ಸಲ್ಲಿಸಿ ಆಪಾದಿತರ ಮೇಲಿನ

ಆರೋಪಗಳು ರುಜುವಾತಾಗಿವೆಯೆಂದು ತಿಳಿಸಿದ್ದರು. ವಿಚಾರಣಾ ವರದಿಯಂತೆ ಮುಂದಿನ ಕ್ರಮ ಕೈಗೊಳ್ಳುವ ಮುನ್ನ ಮೇಲೆ ಓದಲಾದ ಕ್ರಮ ಸಂಖ್ಯೆ.(6) ಪ್ರಕಾರ ಆಪಾದಿತರಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪ್ರಕಾರ ಆಪಾದಿತರುಗಳು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಶಿಸ್ತು ಪ್ರಾಧಿಕಾರವಾದ ಸರ್ಕಾರವು ಪರಿಶೀಲಿಸಿ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ ನಿಯಮ 11ಎ ರಂತೆ ವಿಚಾರಣಾ ವರದಿಯನ್ನು ಈ ಕೆಳಕಂಡ ಕಾರಣಗಳಿಂದಾಗಿ ಭಾಗಶಃ ಒಪ್ಪದೆ ತನ್ನದೇ ಆದ ನಿರ್ಣಯಗಳನ್ನು ಈ ಕೆಳಕಂಡಂತೆ ದಾಖಲಿಸಿದೆ.

**ಶ್ರೀ ಎಸ್.ಪಿ. ಮಠದ್, ಪಂಚಾಯತಿ ಕಾರ್ಯದರ್ಶಿ (ನಿವೃತ್ತ), ಶಿಗ್ಲಿ ಗ್ರಾಮ ಪಂಚಾಯತ್.**

ಇವರು ಖರೀದಿಸಿದ ಪಿ.ವಿ.ಸಿ. ಪೈಪ್‌ಗಳಿಗೆ ಎಸ್.ಪಿ.ಡಿ. ದರಕ್ಕಿಂತ ರೂ.8,194-00 ಗಳನ್ನು ಹೆಚ್ಚಿಗೆ ಪಾವತಿ ಮಾಡಿರುವರೆಂಬ ಆರೋಪ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ. ಆದರೆ ಶ್ರೀ ಎಸ್.ಪಿ. ಮಠದ್, ಇವರು ಸಲ್ಲಿಸಿರುವ ಹೇಳಿಕೆಯನ್ನು ಪರಿಶೀಲಿಸಲಾಗಿ ಅವರು ಎಸ್.ಪಿ.ಡಿ. ದರಗಳನ್ವಯ ಸಾಮಗ್ರಿಗಳನ್ನು ಖರೀದಿಸಬೇಕೆನ್ನುವ ದಿನಾಂಕ: 1.2.2000ರ ಆದೇಶ ಬರುವುದಕ್ಕೆ ಮೊದಲೇ ಅವರು ದಿನಾಂಕ: 20.1.2000 ರಂದು ಪಿ.ವಿ.ಸಿ. ಪೈಪ್‌ಗಳನ್ನು ಖರೀದಿಸಿ ಹಣ ಪಾವತಿ ಮಾಡಿರುವುದರಿಂದ ಇವರ ಗಮನಕ್ಕೆ ಬಾರದ ಆದೇಶವನ್ನು ಪಾಲಿಸಬೇಕೆಂದು ಆಪಾದಿಸಿರುವುದು ಮತ್ತು ಅದಕ್ಕಾಗಿ ಅವರನ್ನು ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲ. ಆದ್ದರಿಂದ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳ ನಿಯಮ 11ಎ ರನ್ವಯ ಸದರಿಯವರ ಮೇಲಿನ ಈ ಆರೋಪವನ್ನು ಕೈಬಿಡಲು ನಿರ್ಣಯಿಸಲಾಗಿದೆ.

ಸದರಿಯವರು ಆರ್.ಸಿ.ಸಿ. ಸಿಸ್ಟರ್ನ್‌ಗಳ ಸಾಕಾಣಿಕೆ ವೆಚ್ಚಕ್ಕಾಗಿ ರೂ.3,150-00 ಗಳನ್ನು ಹೆಚ್ಚಿಗೆ ಪಾವತಿಸಿ ಕರ್ತವ್ಯ ಲೋಪವೆಸಗಿರುವರೆಂಬ ಆರೋಪ ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ. ಈ ಸಾಮಗ್ರಿಗಳನ್ನು ಪೂರೈಸುವ ಸಂಸ್ಥೆಯೇ ಸಾಗಾಣಿಕೆ ವೆಚ್ಚವನ್ನು ಭರಿಸಬೇಕಾಗಿದ್ದರೂ ಸಕಾಲದಲ್ಲಿ ಸಂಸ್ಥೆಯು ಅವುಗಳನ್ನು ಸಾಗಣೆ ಮಾಡಿಕೊಡಲಿಲ್ಲವಾದ್ದರಿಂದ ಪಂಚಾಯತಿ ಅಧ್ಯಕ್ಷರ ಅವಧಿಯು ಮುಗಿಯುವ ಮುನ್ನವೇ ಅವರು ಸಿಸ್ಟರ್ನ್‌ಗಳನ್ನು ತರಿಸಿ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸಿದ್ದಾರೆಂಬುದು ವಿಚಾರಣೆಯಲ್ಲಿ ಕಂಡುಬಂದಿರುವುದರಿಂದ ಪೂರ್ಣ ಮೊತ್ತಕ್ಕೆ ಆಪಾದಿತರನ್ನು ಜವಾಬ್ದಾರರನ್ನಾಗಿ ಮಾಡುವುದು ಸೂಕ್ತವಲ್ಲ. ಇಲ್ಲಿ ಹಣ ದುರುಪಯೋಗವಾಗಿಲ್ಲ. ಬದಲಾಗಿ ನೀರಿನ ಸಮಸ್ಯೆ ಇತ್ಯರ್ಥಪಡಿಸಲು ಕೈಗೊಂಡಿರುವ ಕ್ರಮವಾಗಿವೆ. ಆದ್ದರಿಂದ, ಭರಿಸಲಾದ ಸಾಗಾಣಿಕೆ ವೆಚ್ಚದ ಬಾಬ್ತು ರೂ.3150-00 ಗಳ ಪೈಕಿ ಸದರಿ ಆಪಾದಿತರಿಂದ ಶೇಕಡಾ 50 ರಷ್ಟನ್ನು ವಸೂಲು ಮಾಡಲು ನಿರ್ಣಯಿಸಲಾಗಿದೆ.

ಸದರಿಯವರು ಸಿಮೆಂಟ್ ಏಜೆನ್ಸಿಗೆ ಎಸ್.ಪಿ.ಡಿ. ದರಕ್ಕಿಂತ ರೂ.2,923-00 ಮತ್ತು ಡಿ.ಡಿ. ಕಮೀಷನ್ ರೂ.195-00 ಹೀಗೆ ಒಟ್ಟಿಗೆ ರೂ.3,118-00 ಗಳನ್ನು ಹೆಚ್ಚಿಗೆ ಪಾವತಿಸಿರುವರೆಂಬ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ. ಆಪಾದಿತರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿದಾಗ ಇದೇ ದರಕ್ಕೆ ಇತರೇ ಕಾಮಗಾರಿಗಳಿಗೂ ಸಿಮೆಂಟ್ ಖರೀದಿಸಿರುವುದರಿಂದ ಮತ್ತು ಸದರಿ ದರಕ್ಕಿಂತ ಕಡಿಮೆ ದರಕ್ಕೆ ಸಿಮೆಂಟ್ ಸರಬರಾಜು ಮಾಡಲು ಯಾವ ಏಜೆನ್ಸಿಯು ಒಪ್ಪದಿದ್ದುದರಿಂದ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋದನೆ ಪಡೆದು ಖರೀದಿ ಮಾಡಿರುವುದರಿಂದ ಇದಕ್ಕೆ ಇವರನ್ನೇ ಪೂರ್ಣವಾಗಿ ಹೊಣೆಗಾರರನ್ನಾಗಿ ಮಾಡದೇ ಈ ಬಾಬ್ತು ಇವರ ಜವಾಬ್ದಾರಿ ಶೇಕಡಾ 50 ಎಂದು ನಿರ್ಧರಿಸಿ ಆಪಾದಿಸಲಾದಂತೆ ಆಗಿರುವ ಹೆಚ್ಚುವರಿ ವೆಚ್ಚದಲ್ಲಿ ಶೇಕಡಾ 50 ರಷ್ಟನ್ನು ಇವರಿಂದ ವಸೂಲು ಮಾಡಲು ನಿರ್ಣಯಿಸಲಾಗಿದೆ.

ಇವರು ಕೆ.ಪಿ. ಡಬ್ಲ್ಯೂಡಿ ಪ್ಯಾರಾ 327 ರಂತೆ ಶೇಕಡಾ 10 ರಷ್ಟನ್ನು ಉಳಿತಾಯ ಮಾಡದೆ ಕರ್ತವ್ಯ ಲೋಪವೆಸಗಿರುವರೆಂಬ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದಾರೆ. ಆಪಾದಿತರ ಹೇಳಿಕೆಯನ್ನು ಪರಿಶೀಲಿಸಲಾಗಿ ಕಾಮಗಾರಿಯು ಅವರ ಸೇವಾ ಅವಧಿಯಲ್ಲಿ ಮುಕ್ತಾಯವಾಗದ ಕಾರಣ ಶೇಕಡಾ 10 ರಷ್ಟನ್ನು ಉಳಿತಾಯ ಮಾಡುವಂತೆ ಒತ್ತಾಯ ಮಾಡುವುದು ಸಮರ್ಪಕವಾಗದೆಂದು ನಿರ್ಣಯಿಸಿ ಮತ್ತು ಇಲ್ಲಿ ಹಣ ದುರುಪಯೋಗದ ವಿಷಯ ಒಳಗೊಂಡಿಲ್ಲವಾದ್ದರಿಂದ ಅವರ ಮೇಲಿನ ಈ ಆರೋಪವನ್ನು ಕೈಬಿಡಲು ನಿರ್ಣಯಿಸಲಾಗಿದೆ.

ಕಾಮಗಾರಿಗಳನ್ನು ಕೈಗೊಳ್ಳುವಾಗ ಎನ್.ಎಂ.ಆರ್. ಮತ್ತು ಅಳತೆ ಪುಸ್ತಕಗಳನ್ನು ಸರ್ಕಾರದ ನಿಯಮಗಳನ್ವಯ ನಿರ್ವಹಿಸದೆ ಅನುದಾನ ಬಳಕೆ ಮಾಡಿ ಕರ್ತವ್ಯ ಲೋಪವೆಸಗಿದ್ದಾರೆಂಬ ಆರೋಪ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ವರದಿ ಮಾಡಿದ್ದರೂ ಸಹ ಆಪಾದಿತರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿ ಹಾಗೂ ಆಪಾದಿತರು ಈಗಾಗಲೇ ಸೇವೆಯಿಂದ ನಿವೃತ್ತಿಗೊಂಡಿರುವ ಅಂಶವನ್ನು ಪರಿಗಣಿಸಿ ಈ ಆಪಾದನೆಯನ್ನು ಕೈಬಿಡಲು ನಿರ್ಣಯಿಸಲಾಗಿದೆ.

ಶ್ರೀ ಪಿ.ಎಸ್. ಇನಾಂದಾರ, ಕಿರಿಯ ಇಂಜಿನಿಯರ್, ಶಿರಹಟ್ಟಿ ತಾಲ್ಲೂಕು, ಶಿಗ್ಲಿ ಗ್ರಾಮ ಪಂಚಾಯತಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ 1997 ರಿಂದ 2001ನೇ ಸಾಲಿನ 10ನೇ ಹಣಕಾಸು ಅನುದಾನದ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಾಗ ಎನ್‌ಎಂಆರ್ ಮತ್ತು ಅಳತೆ ಪುಸ್ತಕಗಳನ್ನು ಸರ್ಕಾರದ ನಿಯಮಗಳಂತೆ ಸರಿಯಾಗಿ ನಿರ್ವಹಿಸದೆ ದಿನಗೂಲಿ ನೌಕರರಿಗೆ ಹಣ ಪಾವತಿಸಿದ ಬಗ್ಗೆ ಪಾಸಿಂಗ್ ಆರ್ಡರ್ ಹಾಕದೆ ಹಣ ಸಂದಾಯ ಮಾಡಿ ಕರ್ತವ್ಯಲೋಪವೆಸಗಿದ್ದಾರೆಂಬ ಬಗ್ಗೆ 10ನೇ ಹಣಕಾಸು ಅನುದಾನದ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಾಗ ಎನ್‌ಎಂಆರ್/ಅಳತೆ ಪುಸ್ತಕದಲ್ಲಿ ಅವಶ್ಯವಿರುವ ಪ್ರಮಾಣ ಪತ್ರಗಳನ್ನು ದಾಖಲಿಸುವುದು ಅಗತ್ಯವೆಂಬುದನ್ನು ಆಪಾದಿತರು ಅರಿತಿದ್ದರೂ ಕೂಡ ಸದರಿ ದಾಖಲೆಗಳನ್ನು ನಿರ್ವಹಣೆ ಮಾಡದೆ ಇರುವ ಅಂಶವು ಆಪಾದಿತರ ರಕ್ಷಣಾ ಹೇಳಿಕೆ, ಸಾಕ್ಷಿ ಹೇಳಿಕೆ ಹಾಗೂ ಮಂಡನಾಧಿಕಾರಿಗಳ ಹೇಳಿಕೆಗಳಿಂದ, ಮುಖ್ಯ ಲೆಕ್ಕಾಧಿಕಾರಿಗಳು, ಜಿಪಂ, ಗದಗ್ ಇವರ ಆಕ್ಷೇಪಣೆಯಿಂದಾಗಿ, ಆಪಾದಿತರು ಪ್ರಮಾಣ ಪತ್ರಗಳನ್ನು ದಾಖಲಿಸದೆ, ಲೋಪವೆಸಗಿರುವ ಆರೋಪ ರುಜುವಾತಾಗಿರುತ್ತದೆ. ಸದರಿಯವರು 1997 ರಿಂದ 2001ನೇ ಸಾಲಿನ 10ನೇ ಹಣಕಾಸು ಅನುದಾನದ ಕಾಮಗಾರಿಗಳನ್ನು ಕ್ರಿಯಾ ಯೋಜನೆಯಂತೆ ಕೈಗೊಂಡ ಬಗ್ಗೆ ಎನ್‌ಎಂಆರ್ ಮತ್ತು ಅಳತೆ ಪುಸ್ತಕಗಳನ್ನು ದೃಢೀಕರಿಸಿ ರುಜು ಮಾಡದೆ ಕರ್ತವ್ಯಲೋಪವೆಸಗಿರುವುದು, ಮುಖ್ಯ ಲೆಕ್ಕಾಧಿಕಾರಿಗಳು, ಜಿಪಂ, ಗದಗ್ ಇವರು ಈಗಾಗಲೇ ದಿನಾಂಕ: 13.07.2001 ರಂದು ಸಲ್ಲಿಸಿದ ಲೆಕ್ಕ ತನಿಖಾ ವರದಿಯಲ್ಲಿ ಕಾಮಗಾರಿಗಳನ್ನು ಕ್ರಿಯಾ ಯೋಜನೆಯಂತೆ ಕೈಗೊಳ್ಳಲಾಗಿದೆ ಎಂಬ ಪ್ರಮಾಣ ಪತ್ರಗಳನ್ನು ದಾಖಲಿಸದೆ ಇರುವ ಬಗ್ಗೆ ಆಕ್ಷೇಪಿಸಿದ್ದು, ಇದಲ್ಲದೆ ಆಪಾದಿತರ ರಕ್ಷಣಾ ಹೇಳಿಕೆ, ಸಾಕ್ಷಿ ಹೇಳಿಕೆ ಹಾಗೂ ಮಂಡನಾಧಿಕಾರಿಗಳ ಹೇಳಿಕೆಗಳಿಂದ ಅವರ ಮೇಲಿನ ಸದರಿ ಆರೋಪವೂ ಸಹ ಸಾಬೀತಾಗಿರುತ್ತದೆ.

ಸದರಿಯವರು 1997 ರಿಂದ 2001ನೇ ಸಾಲಿನ 10ನೇ ಹಣಕಾಸು ಅನುದಾನದ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವಾಗ ಕೆಪಿಡಬ್ಲ್ಯೂಡಿ ಪ್ಯಾರ 327 ರಂತೆ ಶೇಕಡ 10 ರಷ್ಟನ್ನು ಉಳಿತಾಯ ಮಾಡಬೇಕೆಂಬ ನಿಯಮವಿದ್ದರೂ ಸಹ ಅದನ್ನು ಪಾಲಿಸದೆ ಕರ್ತವ್ಯಲೋಪವೆಸಗಿ ಉಳಿತಾಯವಾಗಬೇಕಾದ ರೂ.8,918-94 ಗಳ ನಷ್ಟಕ್ಕೆ ಕಾರಣರಾಗಿರುತ್ತಾರೆ. ಆಪಾದಿತರ ರಕ್ಷಣಾ ಹೇಳಿಕೆ, ಸಾಕ್ಷಿ ಹೇಳಿಕೆ ಹಾಗೂ ಮಂಡನಾಧಿಕಾರಿಗಳ ಹೇಳಿಕೆಗಳಿಂದ ರುಜುವಾತಾಗಿರುವುದಾಗಿ ತಿಳಿಸಿದ್ದಾರೆ.

ಶಿಗ್ಲಿ ಗ್ರಾಮ ಪಂಚಾಯತಿವತಿಯಿಂದ 10ನೇ ಹಣಕಾಸು ಅನುದಾನದ ರೂ.86,782-00 ಮೊತ್ತದಷ್ಟು ಕಾಮಗಾರಿಗಳನ್ನು ಕೈಗೊಳ್ಳಲಾಗಿದ್ದು, ಕೆಪಿಡಬ್ಲ್ಯೂಡಿ ಪ್ಯಾರ 327 ರಂತೆ ಶೇಕಡ 10 ರಂತೆ ರೂ.8,678-20 ಗಳನ್ನು ಉಳಿತಾಯ ಮಾಡಬೇಕೆಂಬ ನಿಯಮವಿದ್ದರೂ ಆಪಾದಿತರು ಅಂದಾಜು ಮೊತ್ತದಲ್ಲಿ ಕೇವಲ 1,849-00 ರೂ.ಗಳನ್ನು ಮಾತ್ರ ಉಳಿತಾಯ ಮಾಡಿ ರೂ.6,828-00 ಗಳನ್ನು ಸರ್ಕಾರಕ್ಕೆ ನಷ್ಟವುಂಟು ಮಾಡಿರುವರೆಂಬ ಆರೋಪ, ಆಪಾದಿತರ ರಕ್ಷಣಾ ಹೇಳಿಕೆ, ಸಾಕ್ಷಿ ಹೇಳಿಕೆ ಹಾಗೂ ಮಂಡನಾಧಿಕಾರಿಗಳ ಹೇಳಿಕೆಗಳಿಂದ ಸಾಬೀತಾಗಿರುವುದಾಗಿ ತಿಳಿಸಿದ್ದಾರೆ. ಆದರೆ, ಶೇಕಡಾ 10 ರಂತೆ ಉಳಿತಾಯ ಮಾಡಲು ಒತ್ತಾಯ ಮಾಡುವುದು ಸಮರ್ಪಕವಲ್ಲವೆಂದು ಮತ್ತು ಇಲ್ಲಿ ಹಣಕಾಸಿನ ದುರುಪಯೋಗವಾಗಿಲ್ಲವೆಂದು ಶಿಸ್ತು ಪ್ರಾಧಿಕಾರವಾದ ಸರ್ಕಾರವು ನಿರ್ಣಯಿಸಿ ನಿಯಮ 11ಎ ರಂತೆ ವಿಚಾರಣಾ ವರದಿಯನ್ನು ಒಪ್ಪದೇ ಈ ಆಪಾದನೆ ಕೈಬಿಡಲು ನಿರ್ಧರಿಸಿದೆ.

ಆದ್ದರಿಂದ, ಮೇಲಿನಂತೆ ಎಸ್.ಪಿ. ಮಠದ್, ಅಂದಿನ ಪಂಚಾಯತಿ ಕಾರ್ಯದರ್ಶಿ (ನಿವೃತ್ತ) ಇವರ ಮೇಲೆ ಸಾಬೀತಾದ ಆಪಾದನೆಗಳಂತೆ ಇವರಿಂದ ಉಂಟಾದ ಆರ್ಥಿಕ ನಷ್ಟ 3,134-00 ರೂ.ಗಳನ್ನು ಅದರ ಮೇಲಿನ ಬಡ್ಡಿ ಸಮೇತ ವಸೂಲು ಮಾಡಲು ಹಾಗೂ ಅವರ ಕರ್ತವ್ಯ ಲೋಪಕ್ಕೆ ಸೂಕ್ತ ದಂಡನೆ ವಿಧಿಸಲು, ಶ್ರೀ ಪಿ.ಎಸ್. ಇನಾಂದಾರ, ಕಿರಿಯ ಇಂಜಿನಿಯರ್, ಇವರ ಮೇಲಿನ ಸಾಬೀತಾದ ಆಪಾದನೆಗಳಂತೆ ಇವರ ಕರ್ತವ್ಯ ಲೋಪಕ್ಕೆ ಸಂಬಂಧಿಸಿದಂತೆ ಸೂಕ್ತ ದಂಡನೆ ವಿಧಿಸಲು ನಿರ್ಣಯಿಸಿ ಆ ಬಗ್ಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿ ಆಯೋಗವು ಮೇಲೆ ಓದಲಾದ ಕ್ರಮ ಸಂಖ್ಯೆ: (10)ರ ದಿನಾಂಕ: 4.3.2005 ರ ಪತ್ರದಲ್ಲಿ ತನ್ನ ಸಹಮತಿ ನೀಡಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 46 ಜಿಪಅ 2002, ಬೆಂಗಳೂರು, ದಿನಾಂಕ: 5ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಸ್.ಪಿ. ಮಠದ, ಅಂದಿನ ಗ್ರಾಮ ಪಂಚಾಯತಿ ಕಾರ್ಯದರ್ಶಿ (ನಿವೃತ್ತ), ಶಿಗ್ಲಿ, ಶಿರಹಟ್ಟಿ ತಾಲ್ಲೂಕು ಇವರು ಎಸಗಿರುವ ದುರ್ನಡತೆ ಹಾಗೂ ಇವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟ ರೂ.3,134-00 ಗಳನ್ನು ಹಾಗೂ ಅದರ ಮೇಲಿನ ಬಡ್ಡಿ ಸೇರಿ ವಸೂಲಾಗುವಂತೆ ಮಾಡಲು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 214 ರನ್ವಯ ಇವರ ಪಿಂಚಣಿಯಿಂದ ಪ್ರತಿ ತಿಂಗಳು ರೂ.200-00 ರಂತೆ (ರೂ. ಇನ್ನೂರು ಮಾತ್ರ) ಎರಡು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಿದೆ. ಹಾಗೂ;

ಶ್ರೀ ಪಿ.ಎಸ್. ಇನಾಂದಾರ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಶಿರಹಟ್ಟಿ ಇವರ ಮೇಲಿನ ಆರೋಪಗಳು ಸಾಬೀತಾದ ಕರ್ತವ್ಯ ಲೋಪಕ್ಕಾಗಿ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8(iii) ರನ್ವಯ ಅವರು ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಅವರ ವೇತನದ ಒಂದು ಹಂತವನ್ನು ಒಂದು ವರ್ಷದವರೆಗೆ ಕೆಳಕ್ಕಿಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಪಿ.ಆರ್. 606 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ 2004-05ನೇ ಸಾಲಿನಲ್ಲಿ 64 ಜೀತ ವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಸಲುವಾಗಿ ತುಮಕೂರು ಮತ್ತು ಹಾಸನ ಜಿಲ್ಲಾ ಪಂಚಾಯತಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಕಾರ್ಮಿಕ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಆದೇಶ ಸಂಖ್ಯೆ: ಎಸ್-11011/5/98-ಬಿಎಲ್ ದಿನಾಂಕ:18.2.2005.

**ಪ್ರಸ್ತಾವನೆ:**

2002-03 ಹಾಗೂ 2003-04ನೇ ಸಾಲುಗಳಲ್ಲಿ ರಾಜ್ಯಾದ್ಯಂತ ಕೈಗೊಳ್ಳಲಾದ ನಿರಂತರ ಸಮೀಕ್ಷಾ ಕಾರ್ಯದಲ್ಲಿ, ತುಮಕೂರು ಜಿಲ್ಲೆಯಲ್ಲಿ ಗುರುತಿಸಿ, ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಒಟ್ಟು 64 ಜೀತವಿಮುಕ್ತರಿಗೆ (ಹಾಸನ ಜಿಲ್ಲೆಗೆ ವರ್ಗಾಯಿಸಲಾದ 1 ಪ್ರಕರಣವು ಸೇರಿ) ಪುನರ್ವಸತಿ ಕಲ್ಪಿಸಲು ಒಟ್ಟು ರೂ.12,80,000.00 ಗಳನ್ನು ಬಿಡುಗಡೆ ಮಾಡುವಂತೆ ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಸರ್ಕಾರವನ್ನು ಕೋರಿರುತ್ತಾರೆ.

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯಡಿ ಪ್ರತಿ ಜೀತವಿಮುಕ್ತರ ಪುನರ್ವಸತಿಗಾಗಿ ತಲಾ ರೂ.20,000.00 ಗಳನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇ.50:50ರ ಅನುಪಾತದಲ್ಲಿ ಒದಗಿಸಬೇಕಾಗಿರುತ್ತದೆ. ಅದರಂತೆ ಕೇಂದ್ರ ಸರ್ಕಾರವು ಮೇಲೆ ಓದಲಾದ ಆದೇಶದಲ್ಲಿ ಕೇಂದ್ರದ ಪಾಲಿನ ಅನುದಾನ ರೂ.6,40,000.00 ಗಳನ್ನು ರಾಜ್ಯ ಸರ್ಕಾರಕ್ಕೆ ನೇರವಾಗಿ ಬಿಡುಗಡೆ ಮಾಡಿರುತ್ತದೆ. 2004-05ನೇ ಸಾಲಿನ ರಾಜ್ಯ ಆಯವ್ಯಯದಲ್ಲಿ ಈ ಕಾರ್ಯಕ್ರಮಕ್ಕೆ ರೂ.7,80,000.00 ಗಳ ಅನುದಾನವನ್ನು ಮಾತ್ರ ಹಂಚಿಕೆ ಮಾಡಲಾಗಿದ್ದು ಈ ಪೈಕಿ ಕೇಂದ್ರದ ಪಾಲಿನ ಅನುದಾನವನ್ನು ಮಾತ್ರ ಬಿಡುಗಡೆ ಮಾಡಬಹುದಾಗಿರುತ್ತದೆ. ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ಬಿಡುಗಡೆಗೆ ಪ್ರಸಕ್ತ ಸಾಲಿನಲ್ಲಿ ಹೆಚ್ಚುವರಿ ಆಯವ್ಯಯ ಹಂಚಿಕೆ ಕುರಿತು ಆರ್ಥಿಕ ಇಲಾಖೆ ಸ್ಥಿರೀಕರಿಸುವ ಮುನ್ನ, ಕೇಂದ್ರ ಸರ್ಕಾರವು ರಾಜ್ಯಕ್ಕೆ ಬಿಡುಗಡೆ ಮಾಡಿರುವ ಸದರಿ ಅನುದಾನವನ್ನು 2004-05ನೇ ಸಾಲಿನಲ್ಲಿ ಸದರಿ 64 ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳಿಗೆ (ಕೋಷ್ಟಕದಲ್ಲಿ ತೋರಿಸಿರುವಂತೆ) ಬಿಡುಗಡೆ ಮಾಡಲು ನಿರ್ಧರಿಸಿರುತ್ತೆ. ಅದಕ್ಕಾಗಿ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 4 ಆರ್‌ಬಿಎಲ್ 2004, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

ಕೇಂದ್ರ ಪುರಸ್ಕೃತ ಜೀತವಿಮುಕ್ತರ ಪುನರ್ವಸತಿ ಕಾರ್ಯ ಯೋಜನೆಯನ್ವಯ 2004-05ನೇ ಸಾಲಿನಲ್ಲಿ ಒಟ್ಟು 64 ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸಲು ಕೇಂದ್ರದ ಪಾಲಿನ ಅನುದಾನ ರೂ.6,40,000.00 ಗಳನ್ನು (ಆರು ಲಕ್ಷ ನಲವತ್ತು ಸಾವಿರ ರೂಪಾಯಿಗಳು ಮಾತ್ರ) ಕೆಳಕಂಡ ಕೋಷ್ಟಕದಂತೆ ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಿಗೆ ಬಿಡುಗಡೆ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ.

**ಕೋಷ್ಟಕ**

| ಕ್ರ.ಸಂ. | ಜಿಲ್ಲಾ ಪಂಚಾಯತಿ ಹೆಸರು | ಜೀತ ವಿಮುಕ್ತರ ಸಂಖ್ಯೆ | ಪುನರ್ವಸತಿ ಧನ (ರೂ.ಗಳಲ್ಲಿ) |
|---|---|---|---|
| 1 | ತುಮಕೂರು | 63 | 6,30,000.00 |
| 2 | ಹಾಸನ | 01 | 0,10,000.00 |
| | **ಒಟ್ಟು** | **64** | **6,40,000.00** |

ತುಮಕೂರು ಹಾಗೂ ಹಾಸನ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಸದರಿ ಅನುದಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶಕ್ಕೆ ಮಾತ್ರ ಬಳಸಿಕೊಳ್ಳಲು ಅನುಮತಿಸಲಾಗಿದೆ.

1. ಕೋಷ್ಠಕದಲ್ಲಿನ ಜೀತವಿಮುಕ್ತರು ಈ ಹಿಂದೆ ಜೀತದಾಳುಗಳಾಗಿದ್ದರು ಹಾಗೂ ಅವರನ್ನು ಜೀತಕ್ಕಿರಿಸಿ ಕೊಂಡಿದ್ದ ಮಾಲೀಕರನ್ನು ಫಿರ್ಯಾದು ಮಾಡಲು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುತ್ತೆಂಬ ಬಗ್ಗೆ ದೃಢೀಕರಣವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಪಡೆದುಕೊಂಡು, ಸದರಿ ಜೀತವಿಮುಕ್ತರಿಗೆ ಪುನರ್ವಸತಿ ಕಲ್ಪಿಸುವುದು.
2. ರಾಜ್ಯ ಸರ್ಕಾರದ ದಿನಾಂಕ: 11.10.2001 ಹಾಗೂ 15.10.2001ರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್‌ಡಿಪಿ 26 ಆರ್‌ಬಿಎಲ್ 2000 ರೊಂದಿಗೆ ಕ್ರಮವಾಗಿ ಎಲ್ಲಾ ಜಿಲ್ಲಾಧಿಕಾರಿಗಳಿಗೂ ಹಾಗೂ ಎಲ್ಲಾ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೂ ಕಳುಹಿಸಿರುವ ಕೇಂದ್ರ ಸರ್ಕಾರದ ದಿನಾಂಕ: 8.8.2000ದ ಆದೇಶ ಸಂಖ್ಯೆ: ಆರ್-11011/2/98/BL ರಲ್ಲಿ ಸೂಚಿಸಿರುವ ಮಾರ್ಗಸೂಚಿಗಳ ಅನುಸಾರ ಪುನರ್ವಸತಿ ಧನವನ್ನು ವೆಚ್ಚ ಮಾಡತಕ್ಕದ್ದು.
3. ಭಾರತದ ಕಂಟ್ರೋಲರ್ ಮತ್ತು ಮಹಾಲೇಖಪಾಲರು ಇಚ್ಛಿಪಟ್ಟಲ್ಲಿ ಟೆಸ್ಟ್ ಚೆಕ್‌ಗೆ ಒದಗಿಸಲು ಪ್ರತಿ ಯೋಜನೆವಾರು ವೆಚ್ಚದ ಲೆಕ್ಕಪತ್ರಗಳನ್ನು ಸದರಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ನಿರ್ವಹಿಸತಕ್ಕದ್ದು.
4. 1976ರ ಜೀತಗಾರಿಕೆ ಪದ್ಧತಿ (ನಿರ್ಮೂಲನ) ಕಾಯ್ದೆ ಹಾಗೂ ಅದರಡಿ ರೂಪಿಸಿರುವ ನಿಯಮಗಳಂತೆ ಗುರುತಿಸಿ ಜೀತಪದ್ಧತಿಯಿಂದ ಬಿಡುಗಡೆಗೊಳಿಸಲಾದ ಜೀತವಿಮುಕ್ತರಿಗೆ ಮಾತ್ರ ಈ ಯೋಜನೆಯಡಿ ಸಹಾಯ ಸೌಲಭ್ಯಗಳನ್ನು ಕಲ್ಪಿಸತಕ್ಕದ್ದು.
5. ಈ ಯೋಜನೆಯಡಿ ಪುನರ್ವಸತಿ ಸೌಲಭ್ಯವನ್ನು ಒದಗಿಸುವಾಗ ಸುಮಾರು 5 ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಅವಧಿಯಿಂದ ಜೀತಪದ್ಧತಿಯಡಿ ಸಂಕಷ್ಟದಲ್ಲಿದ್ದಂತಹ ಜೀತದಾಳುಗಳಿಗೆ ಆದ್ಯತೆಯನ್ನು ನೀಡತಕ್ಕದ್ದು.
6. ಬಿಡುಗಡೆ ಮಾಡಿರುವ ಅನುದಾನವನ್ನು 2005 ಮಾರ್ಚ್ ಮಾಹೆ ಅಂತ್ಯದೊಳಗೆ ತಪ್ಪದೇ ಖಜಾನೆಯಿಂದ ಸೆಳೆದು ಯಾವುದೇ ಕಾರಣಕ್ಕೂ ಕಾಯ್ದಿರಿಸದೇ ಜೀತವಿಮುಕ್ತರ ಪುನರ್ವಸತಿಗಾಗಿ ಕೂಡಲೇ ಬಳಕೆ ಮಾಡತಕ್ಕದ್ದು.
7. ವೆಚ್ಚ ಮಾಡಲಾದ ಅನುದಾನಕ್ಕೆ ಹಣಬಳಕೆ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಲಾದ ತಃಖ್ತೆಗಳನ್ನು ಸರ್ಕಾರಕ್ಕೆ ತಪ್ಪದೇ ಕಳುಹಿಸತಕ್ಕದ್ದು. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲಿ ಪ್ರತಿ ಮಾಹೆಯೂ ಭೌತಿಕ ಹಾಗೂ ಆರ್ಥಿಕ ಪ್ರಗತಿ ವರದಿಗಳನ್ನು ನಿಯತಕಾಲಿಕವಾಗಿ ತಪ್ಪದೇ ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ಕಳುಹಿಸತಕ್ಕದ್ದು.
8. ಎಲ್ಲಾ ವೆಚ್ಚಗಳನ್ನು ಲೆಕ್ಕಶೀರ್ಷಿಕೆ 2230-ಕಾರ್ಮಿಕ ಮತ್ತು ಉದ್ಯೋಗ-01-ಕಾರ್ಮಿಕ-197-ತಾಲ್ಲೂಕು ಪಂಚಾಯತಿಗಳಿಗೆ ಸಹಾಯ-1-ತಾಲ್ಲೂಕು ಪಂಚಾಯತಿಗಳು-01-ಜೀತದಾಳುಗಳ ಪುನರ್ವಸತಿ-051-ಸಾಮಾನ್ಯ ವೆಚ್ಚ (ಯೋಜನೆ)ಗೆ ಜಮಾ ಮಾಡತಕ್ಕದ್ದು.
9. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ.362.ವಿಸುಕೋ.2005, ದಿನಾಂಕ: 17.03.2005 ಹಾಗೂ ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂಖ್ಯೆ: ಗ್ರಾಅಪ.85.ಪಿಬಿಎಸ್.05 ದಿನಾಂಕ: 22.3.2005 ರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ. ಹಿರೇಮಣಿಯವರ್**

ಪಿ.ಆರ್. 608

ನಿರ್ದೇಶಕರು, ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ ಪ.ನಿ.

ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ವಿರುದ್ಧ ಇಲಾಖಾ ವಿಚಾರಣೆ - ಅಂತಿಮ ಆದೇಶ - ಬಗ್ಗೆ.

**ಓದಲಾಗಿದೆ:**
1. ಮುಕಾನಿ, ಜಿಪಂ, ಪತ್ರ ಸಂಖ್ಯೆ: ಜಿಪಂಬ:ಸಿ-3:ದಿನಗೂಲಿ:ಅಪೀಲು:29:01-02, ದಿನಾಂಕ: 3.8.2002.
2. ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಇವರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿನಾಂಕ: 18.10.2003.
3. ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಇವರು ದಿನಾಂಕ: 22.11.2003 ಮತ್ತು 19.11.2003 ರಂದು ನೀಡಿದ ಲಿಖಿತ ಹೇಳಿಕೆ.
4. ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.2004.
5. ವಿಚಾರಣಾಧಿಕಾರಿಗಳ ದಿನಾಂಕ: 30.8.2004 ವಿಚಾರಣಾ ವರದಿ.
6. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.2004.
7. 2ನೇ ಕಾರಣ ಕೇಳುವ ನೋಟೀಸಿಗೆ ಸದರಿ ನೌಕರರು ನೀಡಿದ ಲಿಖಿತ ಉತ್ತರದ ದಿನಾಂಕ: 20.11.2004 ಮತ್ತು 24.11.2004.
8. ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 2003, ದಿನಾಂಕ: 22.1.2005.
9. ಕರ್ನಾಟಕ ಲೋಕ ಸೇವಾ ಆಯೋಗ ಇವರ ಪತ್ರ ಸಂಖ್ಯೆ: PSC 151 CNS 04, ದಿನಾಂಕ: 5.3.2005.

**ಪ್ರಸ್ತಾವನೆ:**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 3.8.2002ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 26932-26941/99 ರಲ್ಲಿ ದಿನಾಂಕ: 12.10.99 ರಂದು ನೀಡಿದ್ದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವಂತೆ ಸರ್ಕಾರವು ದಿನಾಂಕ: 4.11.2000, 10.1.2001 ಮತ್ತು 12.6.2001 ರಂದು ಬಳ್ಳಾರಿ ಜಿಲ್ಲಾ ಪಂಚಾಯತ್ ಕಛೇರಿಗೆ ಪತ್ರ ಬರೆದು ಆ ಬಗ್ಗೆ ನೆನಪೋಲೆಗಳನ್ನು ಹೊರಡಿಸಿದ್ದರೂ ಸಹ ಅಂದು ಸದರಿ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಜಿಲ್ಲಾ ಪಂಚಾಯತ್, ಬಳ್ಳಾರಿ, ಇವರು ಸರ್ಕಾರದ ನಿರ್ದೇಶನದಂತೆ ಸಂಬಂಧಿಸಿದ ಪತ್ರಗಳ ಬಗ್ಗೆ ಮೇಲಾಧಿಕಾರಿಗಳಿಗೆ ಮಂಡಿಸದೆ ಮತ್ತು ಏನೂ ಕ್ರಮ ಕೈಗೊಳ್ಳದೇ ಇದ್ದುದರಿಂದ ಸದರಿ ತೀರ್ಪನ್ನು ಅನುಷ್ಠಾನ ಗೊಳಿಸಿಲ್ಲವೆಂದು ಅರ್ಜಿದಾರರಲ್ಲಿ ಕೆಲವರು ಶ್ರೀ ಜಾನ್ ವಿಲಿಯಂ ಮತ್ತು ಶ್ರೀ ಜೆ. ಯರ್ರಿಸ್ವಾಮಿ ಮತ್ತಿತರು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನ್ಯಾಯಾಲಯ ನಿಂದನಾ ಅರ್ಜಿ ಸಂಖ್ಯೆ: 2611/01 ಮತ್ತು 356-363/02 ನ್ನು ದಾಖಲಿಸಿದ್ದರು. ಆದರೆ, ಅರ್ಜಿದಾರರೆಲ್ಲರೂ ದಿನಾಂಕ: 1.7.84ರ ನಂತರ ದಿನಗೂಲಿ ಸೇವೆಗೆ ಸೇರಿದವರಾಗಿದ್ದರೂ ಸಹ ಸದರಿ ನಿಂದನಾ ಅರ್ಜಿಯನ್ನು ವಜಾಗೊಳಿಸಲು ಬೇರೆ ದಾರಿ ಇಲ್ಲದೆ ಸರ್ಕಾರ ಅವರ ಸೇವೆಯನ್ನು ಸಕ್ರಮಗೊಳಿಸಲಾಯಿತು. ಆದ್ದರಿಂದ ಮೇಲಿನ ಅರ್ಜಿದಾರರ ಸೇವೆಯನ್ನು ಸಕ್ರಮಗೊಳಿಸಲು ಕಾರಣರಾಗಿ, ಕರ್ತವ್ಯಲೋಪವೆಸಗಿರುವುದರಿಂದ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವ.ನೀ.ನೇ) ನಿಯಮಾವಳಿ 1957 ರನ್ವಯ ಶಿಸ್ತು ಕ್ರಮ ಜರುಗಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರು ಪ್ರಸ್ತಾವನೆ ಸಲ್ಲಿಸಿದ್ದರು.

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಎ. ವಿಜಯಕುಮಾರ್ ಹಾಗೂ ಶ್ರೀ ಜಿ. ಕೃಷ್ಣಮೂರ್ತಿ ಅಂದಿನ ಪ್ರ.ದ.ಸ. ಇವರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (2) ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ತಮ್ಮ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಆಪಾದಿತ ನೌಕರರು ಸದರಿ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (3) ರಲ್ಲಿ ಲಿಖಿತ ಹೇಳಿಕೆಗಳನ್ನು ಸಲ್ಲಿಸಿದ್ದು, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಸದರಿಯವರ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಮತ್ತು ಇವರುಗಳು ಕರ್ತವ್ಯ ಲೋಪ ಮಾಡಿ ದುರ್ನಡತೆ ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಆಪಾದಿತರ ಮೇಲಿನ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಪ್ರಕರಣದಲ್ಲಿ ವಿವರವಾದ ಜಂಟಿ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.01.2004 ರಲ್ಲಿ ಬಳ್ಳಾರಿ ಜಿಲ್ಲಾ ಪಂಚಾಯತ್ ಉಪ ಕಾರ್ಯದರ್ಶಿ (ಆಡಳಿತ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಸದರಿ ಜಿಲ್ಲಾ ಪಂಚಾಯತ್‌ನ ಸಹಾಯಕ ಕಾರ್ಯದರ್ಶಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಪ್ರಕರಣದಲ್ಲಿ ವಿಚಾರಣೆ ನಡೆಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ: 30.8.2004 ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿ ಆಪಾದಿತರ ಮೇಲಿನ ಆರೋಪಗಳು ಸಾಬೀತಾಗಿರುತ್ತವೆಯೆಂದು ಅಭಿಪ್ರಾಯಪಟ್ಟಿದ್ದರಿಂದ, ಸದರಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ದಿನಾಂಕ: 22.1.2004 ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಇವರುಗಳು 2ನೇ ಕಾರಣ ಕೇಳುವ ನೋಟೀಸಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿನಾಂಕ: 20.11.2004 ಮತ್ತು 24.11.2004 ರಲ್ಲಿ ಲಿಖಿತ ಉತ್ತರ ಸಲ್ಲಿಸಿ, ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿರುತ್ತಾರೆ. ವಿವರಗಳು ಕೆಳಕಂಡಂತಿವೆ.

**ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಇವರ ಲಿಖಿತ ಉತ್ತರ:**

ಇವರು ಬಳ್ಳಾರಿ ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರಿಟ್ ಅರ್ಜಿ ಸಂಖ್ಯೆ: 26932-26941/99ರ ಬಗ್ಗೆ ಸರ್ಕಾರಿ ವಕೀಲರಿಂದ ದಿನಾಂಕ: 29.9.1999ರ ಪತ್ರ ಹಾಗೂ ಲಗತ್ತುಗಳನ್ನು ದಿನಾಂಕ: 30.9.1999 ರಂದು ಪಡೆದು ಸದರಿ ವಿಷಯಕ್ಕೆ ಸಂಬಂಧಿಸಿದಂತೆ ಕಡತ ಸಂಖ್ಯೆ: 19:99-00 ನ್ನು ದಿನಾಂಕ: 4.10.1999 ರಂದು ಹಿರಿಯ ಅಧಿಕಾರಿಗಳಿಗೆ ಮಂಡಿಸಿರುವುದು ಮತ್ತು ದಿನಾಂಕ: 21.10.99ರ ಪತ್ರವನ್ನು ದಿನಾಂಕ: 26.10.1999 ರಂದು ಪಡೆದು ಸೂಕ್ತ ಕ್ರಮಕ್ಕಾಗಿ ಹಿರಿಯ ಅಧಿಕಾರಿಗಳಿಗೆ ಮಂಡಿಸಿದ್ದಾರೆಂದು ನಂತರ ಹಿರಿಯ ಅಧಿಕಾರಿಗಳ ಆದೇಶದ ಮೇರೆಗೆ ಕೋರ್ಟು ಪ್ರಕರಣಗಳಿಗೆ ಸಂಬಂಧಿಸಿದ ಅಪೀಲು ಸಂಕಲನವನ್ನು ಮತ್ತು ಸದರಿ ಸಂಕಲನಕ್ಕೆ ಸಂಬಂಧಿಸಿದ ಎಲ್ಲಾ ಕಡತಗಳನ್ನು ದಿನಾಂಕ: 29.9.2000 ರಂದು ಶ್ರೀ ಎ. ವಿಜಯಕುಮಾರ್, ಪ್ರ.ದ.ಸ. ಇವರಿಗೆ ಚಾರ್ಜ್ ಲಿಸ್ಟ್‌ನ್ನು ವಹಿಸಿಕೊಟ್ಟಿರುವುದಾಗಿ, ಈ ಚಾರ್ಜ್ ಲಿಸ್ಟ್‌ನಲ್ಲಿ ಕಡತ ಸಂಖ್ಯೆ: 19:1999-2000 ಸಹ ಸೇರಿರುತ್ತದೆ. ಅಂದು ಸದರಿ ಕಡತ ಚಾರ್ಜ್ ಲಿಸ್ಟ್‌ನಲ್ಲಿ ಇಲ್ಲವೆಂದು X ಗುರುತು ಮಾಡಿರುವುದಿಲ್ಲ. ನಂತರ ತನ್ನ ಬಳಿ ಇರುವ ಚಾರ್ಜ್ ಲಿಸ್ಟ್‌ನಲ್ಲಿ ತಾನೇ X ಗುರುತು ಮಾಡಿ ಸದರಿ ಕಡತ ಸ್ವೀಕರಿಸಿಲ್ಲವೆಂದು ವಿಚಾರಣಾ ಸಮಯದಲ್ಲಿ ತನ್ನ ವಿರುದ್ಧ ಆಪಾದಿಸಿರುವುದಾಗಿ ತಿಳಿಸಿರುತ್ತಾರೆ.

**ಶ್ರೀ ಎ. ವಿಜಯಕುಮಾರ್, ಪ್ರ.ದ.ಸ. ಇವರ ಲಿಖಿತ ಉತ್ತರ:**

ಇಲ್ಲಿಯೂ ಸಹ ಕಡತ ಸಂಖ್ಯೆ: 19:1999-2000ನ್ನು ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಶ್ರೀ ಎ. ವಿಜಯಕುಮಾರ್, ಪ್ರ.ದ.ಸ. ರಿಗೆ ವಹಿಸಿಕೊಟ್ಟಿದ್ದಾರೆ ಎಂದು ಸಾಬೀತುಪಡಿಸದೆ ಶ್ರೀ ಎ. ವಿಜಯಕುಮಾರ್, ಪ್ರ.ದ.ಸ.ರು ಶ್ರೀ ಎಂ. ಈಶ್ವರಪ್ಪ, ಪ್ರ.ದ.ಸ.ಗೆ ವಹಿಸಿಕೊಟ್ಟಿಲ್ಲ ಎಂದಿಷ್ಟೆ ಹೇಳಲಾಗಿದೆ.

ಕಡತ ಸಂಖ್ಯೆ: 19:99-2000ನ್ನು ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಮಂಡಿಸಿರುತ್ತಾರೆ ಎಂದು ಎರಡನೇ ಸಾಕ್ಷಿಯವರು ಹೇಳಿದಾಗ, ಈ ಕಡತವನ್ನು ಪ್ರಾರಂಭಿಸಲು ಪ್ರಮುಖ ದಾಖಲಾತಿಗಳಾದ ಸರ್ಕಾರದ ಪತ್ರ ರಿಟ್ ಅರ್ಜಿ ಸಂಖ್ಯೆ: 26932-41:99 ಮತ್ತು ವಕೀಲರ ಪತ್ರ ಇತ್ಯಾದಿಗಳು ದಿನಾಂಕ: 5.12.2001 ರವರೆಗೆ ಸದರಿ ಪ್ರ.ದ.ಸ. ರ ಬಳಿ ಹೇಗೆ ಇರಲು ಸಾಧ್ಯ? ಮತ್ತು ನನಗೆ ಚಾರ್ಜ್ ಕೊಡುವಾಗಾಗಲೀ, ಸರ್ಕಾರದ ನೆನಪು ಪತ್ರಗಳು ಬಂದು ನಾನು ಜ್ಞಾಪಿಸಿದಾಗಾಗಲೀ ಅವುಗಳನ್ನು ನನಗೇಕೆ ಹಸ್ತಾಂತರಿಸಿಲ್ಲವೆಂದು ಯಾರೂ ಕೇಳಿಲ್ಲ.

ಮೂರನೆಯ ಸಾಕ್ಷಿಯವರು ತಮ್ಮ ಲಿಖಿತ ಹೇಳಿಕೆಯಲ್ಲಿ ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ.ರು ಸಲ್ಲಿಸಿರುವ ಚಾರ್ಜ್ ಲಿಸ್ಟ್‌ನ ಕ್ರಮ ಸಂಖ್ಯೆ:66 ರೌಂಡ್ ಮಾಡಲಾಗಿದೆ ಎಂದು ಹೇಳಿರುತ್ತಾರೆ. ಈ ಹೇಳಿಕೆಯನ್ನು ವರದಿಯಲ್ಲಿ ಕಾಣಿಸಿಲ್ಲ. ಮಂಡನಾಧಿಕಾರಿಗಳು ವಿಚಾರಣಾ ಸಮಯದಲ್ಲಿ

ನೆನಪೋಲೆ ಪತ್ರಗಳನ್ನು ಇವರು ಮೌಖಿಕವಾಗಿ ಅಧಿಕಾರಿಗಳಿಗೆ ತಿಳಿಸುವ ಬದಲು ಲಿಖಿತ ರೂಪದಲ್ಲಿ ನೀಡಿಲ್ಲವೆಂದು ಆಪಾದಿಸಿರುತ್ತಾರೆ. ಆದರೆ ನೆನಪೋಲೆ ಪತ್ರಗಳ ಮೇಲೆ ಅಧಿಕಾರಿಗಳು ಮಾಡಿರುವ ಸಹಿ ಮತ್ತು ಸಂಕಲನದ ಸಂಖ್ಯೆ ನಮೂದಿಸಿದೆ.

ವಿಚಾರಣಾಧಿಕಾರಿಗಳ ವರದಿಯು ಸಂಪೂರ್ಣವಾಗಿ ಬೇರೆಯವರ ತಪ್ಪು ಮಾರ್ಗದರ್ಶನದಿಂದಾಗಿ ಬರೆಯಲ್ಪಟ್ಟಿದೆ. ಆದ್ದರಿಂದ ಈ ಬಗ್ಗೆ ತಾವು ನ್ಯಾಯಯುತವಾದ ತೀರ್ಪನ್ನು ನೀಡಬೇಕೆಂದು ಕೋರಿರುತ್ತಾರೆ.

ಶ್ರೀ ಜಿ. ಕೃಷ್ಣಮೂರ್ತಿ, ಪ್ರ.ದ.ಸ. ಇವರು ಮೇಲಿನ ಪ್ಯಾರಾದಲ್ಲಿ ತಿಳಿಸಿರುವಂತೆ ಸದರಿ ಕಡತವನ್ನು ಶ್ರೀ ವಿಜಯಕುಮಾರ್, ಅಂದಿನ ಪ್ರ.ದ.ಸ. ಇವರಿಗೆ ವಹಿಸಿಕೊಟ್ಟಿರುವುದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯೊಂದಿಗೆ ಸಲ್ಲಿಸಿರುವ ದಾಖಲೆಗಳಿಂದ ತಿಳಿದು ಬರುತ್ತದೆ. ಆದರೂ ಸಹ ಸರ್ಕಾರದಿಂದ ನೆನಪೋಲೆಗಳು ಹೊರಡಿಸಿದ ನಂತರವೂ ಸದರಿ ಕಡತ ಹಾಗೂ ಅದಕ್ಕೆ ಸಂಬಂಧಪಟ್ಟ ಪತ್ರಗಳನ್ನು ಸಾಕಷ್ಟು ವಿಳಂಬಿಸಿ ಶ್ರೀ ವಿಜಯಕುಮಾರ್ ಇವರಿಗೆ ವಹಿಸಿಕೊಟ್ಟಿರುವುದು ದಾಖಲೆಗಳಿಂದ ತಿಳಿದು ಬರುತ್ತದೆ.

ಶ್ರೀ ಎ. ವಿಜಯಕುಮಾರ್ ಅಂದಿನ ಪ್ರ.ದ.ಸ. ಇವರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಉತ್ತರವನ್ನು ಪರಿಶೀಲಿಸಲಾಗಿ, ಸದರಿ ಕಡತವನ್ನು ಶ್ರೀ ಜಿ. ಕೃಷ್ಣಮೂರ್ತಿ ಇವರಿಂದ ವಹಿಸಿಕೊಂಡ ನಂತರ ಸಹ ಸಕಾಲದಲ್ಲಿ ಮಂಡಿಸದೇ ಇರುವುದು. ಮತ್ತು ಇದಕ್ಕೆ ಸಂಬಂಧಪಟ್ಟ ನೆನಪೋಲೆ ಸ್ವೀಕೃತಿ ಪತ್ರಗಳು ಬಂದನಂತರ ಸಹ ಕಡತದಲ್ಲಿ ಮಂಡಿಸದೇ ಇರುವುದು ಕಂಡು ಬರುತ್ತದೆ. ಇವರು ಮಾಡಿರುವ ಈ ಕರ್ತವ್ಯ ಲೋಪದಿಂದಾಗಿ, ಸದರಿ ಜಿಲ್ಲಾ ಪಂಚಾಯತ್‌ನ ಕೆಲವು ದಿನಗೂಲಿ ನೌಕರರು ದಿನಾಂಕ: 1.7.84ರ ನಂತರ ನೇಮಕಗೊಂಡಿದ್ದರೂ ಸಹ, ನಿಯಮಗಳಲ್ಲಿ ಅವಕಾಶವಿಲ್ಲದಿದ್ದರೂ ಸಹ ಒಟ್ಟು 9 ಜನ ದಿನಗೂಲಿ ನೌಕರರ ಸೇವೆಯನ್ನು ವಿಧಿಯಿಲ್ಲದೆ ಅನಿವಾರ್ಯವಾಗಿ ಉಚ್ಚ ನ್ಯಾಯಾಲಯದ ಆದೇಶದಂತೆ ಸೇವೆ ಸಕ್ರಮಗೊಳಿಸಬೇಕಾಯಿತು.

ಇವರು ಮಾಡಿರುವ ಕರ್ತವ್ಯ ಲೋಪ, ಇತ್ಯಾದಿಗಳಿಂದಾಗಿ ಸರ್ಕಾರಕ್ಕೆ ಪ್ರತಿ ವರ್ಷ ಲಕ್ಷಾಂತರ ರೂಪಾಯಿ ಆರ್ಥಿಕ ಹೊರೆಯಾಗಿದೆ. ಆದ್ದರಿಂದ ಅವರು ನೀಡಿರುವ ಲಿಖಿತ ಉತ್ತರಗಳು ಸಮರ್ಪಕವಾಗಿಲ್ಲವೆಂದು ಕಂಡು ಬಂದಿರುವುದರಿಂದ ಅವರು ನೀಡಿರುವ ವಿವರಣೆಯನ್ನು ಒಪ್ಪಲು ಯಾವುದೇ ಸಕಾರಣಗಳು ಇಲ್ಲದ ಕಾರಣ ವಿಚಾರಣಾ ವರದಿಯಲ್ಲಿ ಇವರುಗಳ ಮೇಲೆ ಮಾಡಿರುವ ಆರೋಪಗಳು ಸಾಬೀತಾಗಿದೆ ಎಂದು ತಿಳಿಸಿರುವುದರಿಂದ, ಆಪಾದಿತರ ಮೇಲಿನ ಸಾಬೀತಾದ ಆರೋಪಗಳಿಗೆ ಅನುಗುಣವಾಗಿ ಆಪಾದಿತರಿಗೆ ಸೂಕ್ತ ದಂಡನೆ ವಿಧಿಸಲು ಸರ್ಕಾರ ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (8) ರಲ್ಲಿ ಶ್ರೀ ಎ. ವಿಜಯಕುಮಾರ್, ಅಂದಿನ ಪ್ರ.ದ.ಸ. ಇವರಿಗೆ ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 03, ದಿನಾಂಕ: 22.1.2005 ರಂದು ದಂಡನೆ ವಿಧಿಸಿ, ಶ್ರೀ ಜಿ. ಕೃಷ್ಣಮೂರ್ತಿ, ಅಂದಿನ ಪ್ರದಸ ಇವರು ಈಗಾಗಲೇ ಸೇವೆಯಿಂದ ನಿವೃತ್ತಿ ಹೊಂದಿರುವುದರಿಂದ ಅವರಿಗೆ ದಂಡನೆ ವಿಧಿಸುವ ಬಗ್ಗೆ ಲೋಕಸೇವಾ ಆಯೋಗದ ಸಹಮತಿ ಪಡೆದು ನಂತರ ದಂಡನೆ ಆದೇಶ ಹೊರಡಿಸಲಾಗುವುದೆಂದು ತಿಳಿಸಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (9) ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗವು ಸಹಮತಿ ನೀಡಿದ್ದು ಶ್ರೀ ಜಿ. ಕೃಷ್ಣಮೂರ್ತಿ, ಅಂದಿನ ಪ್ರ.ದ.ಸ, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರಿಗೆ, ಇವರ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತನದಿಂದಾಗಿ ಸರ್ಕಾರಕ್ಕೆ ಅಪಾರ ನಷ್ಟ ಆಗಿರುವುದರಿಂದ ಅವರ ಡಿ.ಸಿ.ಆರ್.ಜಿ. ಯನ್ನು ಪೂರ್ಣವಾಗಿ ವಸೂಲು ಮಾಡುವುದು ಹಾಗೂ ಪಿಂಚಣಿಯಿಂದ ಶೇಕಡಾ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರ ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 23 ಇಎನ್‌ಕ್ಯೂ 2003, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ. ಕೃಷ್ಣಮೂರ್ತಿ, ಅಂದಿನ ಪ್ರದಸ, ಜಿಲ್ಲಾ ಪಂಚಾಯತ್, ಬಳ್ಳಾರಿ, ಇವರು ಮಾಡಿರುವ ಕರ್ತವ್ಯ ಲೋಪ, ಹಾಗೂ ಇವರ ಬೇಜವಾಬ್ದಾರಿತನ ಮತ್ತು ನಿರ್ಲಕ್ಷತನದಿಂದಾಗಿ ಸರ್ಕಾರಕ್ಕೆ ಅಪಾರ ನಷ್ಟ ಆಗಿರುವುದರಿಂದ, ಸದರಿ ನಷ್ಟ ಹಾಗೂ ಇವರ ಕರ್ತವ್ಯ ಲೋಪಕ್ಕನುಗುಣವಾಗಿ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ ಕೆ.ಸಿ.ಎಸ್.ಆರ್. ನಿಯಮ 214 ರಂತೆ ಅವರ ಡಿ.ಸಿ.ಆರ್.ಜಿ. ಯನ್ನು ಪೂರ್ಣವಾಗಿ ವಸೂಲು ಮಾಡುವುದು ಹಾಗೂ ಪಿಂಚಣಿಯಿಂದ ಶೇಕಡಾ 50 ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆ ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 609

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್. ಹಿರೇಮಠ, ಸರ್ಕಾರದ ಅಧೀನ ಕಾರ್ಯದರ್ಶಿಗಳು ಹಾಗೂ ಮುನಿರಾಜಪ್ಪ, ಹಿರಿಯ ಸಹಾಯಕರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 2004, ದಿನಾಂಕ: 29.4.2004.
2. ಶ್ರೀ ಡಿ.ಬಿ. ಗಣಾಚಾರಿ, ಅಧೀನ ಕಾರ್ಯದರ್ಶಿ ರವರ ದಿನಾಂಕ: 10.12.2004ರ ಲಿಖಿತ ಉತ್ತರ.
3. ಶ್ರೀ ಎಸ್.ಆರ್. ಹಿರೇಮಠ, ಅಧೀನ ಕಾರ್ಯದರ್ಶಿರವರ ದಿನಾಂಕ: 20.12.2004ರ ಲಿಖಿತ ಉತ್ತರ.
4. ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರ ದಿನಾಂಕ: 10.12.2004ರ ಲಿಖಿತ ಉತ್ತರ.

**ಪ್ರಸ್ತಾವನೆ:**

1996-97ನೇ ಸಾಲಿನಲ್ಲಿ, ಕರ್ನಾಟಕ ಸರ್ಕಾರದ ಸಚಿವಾಲಯದ, ನಗರಾಭಿವೃದ್ಧಿ ಇಲಾಖೆಯಲ್ಲಿ, ಶ್ರೀ ಡಿ.ಬಿ. ಗಣಾಚಾರಿಯವರು ಅಧೀನ ಕಾರ್ಯದರ್ಶಿಯಾಗಿ ಶ್ರೀ ಎಸ್.ಆರ್. ಹಿರೇಮಠ್‌ರವರು ಶಾಖಾಧಿಕಾರಿಗಳಾಗಿ, ಶ್ರೀ ಜಿ. ಮುನಿರಾಜಪ್ಪ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ಪುರಸಭೆಗೆ, ಸಂಬಂಧಿಸಿದ, 167X147 ಅಡಿ ಅಳತೆಯ ನಿವೇಶನವನ್ನು ಶ್ರೀ ಭೀಮಣ್ಣ ಎನ್ನುವವರಿಗೆ ಶಾಶ್ವತ ಚಿತ್ರಮಂದಿರ ನಿರ್ಮಿಸಲು, ಸರ್ಕಾರದ ಆದೇಶ ಸಂಖ್ಯೆ: ನಅಇ 180 ಟಿಎಂಡಿ 95 ದಿನಾಂಕ: 18.1.1997 ರಲ್ಲಿ ಅಂದಿನ ಅಧೀನ ಕಾರ್ಯದರ್ಶಿ ಶ್ರೀ ಡಿ.ಬಿ. ಗಣಾಚಾರಿರವರ ಸಹಿಯಲ್ಲಿ ಆದೇಶವನ್ನು ಹೊರಡಿಸಲಾಗಿದೆ. ಇದರಂತೆ ಶ್ರೀ ಭೀಮಣ್ಣ ನವರಿಗೆ ಚಳ್ಳಕೆರೆಯ ಪುರಸಭೆಯು ಒಂದು ಚದರ ಮೀಟರಿಗೆ

**ರೂ.100.00** ರಂತೆ ದರ ವಸೂಲಿ ಮಾಡಿ ನಿವೇಶನವನ್ನು ನೋಂದಾಯಿಸಿ ಕೊಟ್ಟಿರುತ್ತದೆ. ಆದರೆ ತತ್ಸಂಬಂಧ ಕಡತ ಮತ್ತು ಆದೇಶದ ಕಛೇರಿ ಪ್ರತಿಯಲ್ಲಿ ಚದರ ಅಡಿಗೆ **ರೂ.100.00** ದರ ವಿಧಿಸಿ ಮಾರಾಟ ಮಾಡಲು ಅನುಮೋದನೆಯಾಗಿರುತ್ತದೆ. ಆದ್ದರಿಂದ ಆದೇಶದ ಮೂಲ ಪ್ರತಿಯಲ್ಲಿ ಚದರ ಅಡಿ ಅನ್ನುವ ಬದಲಾಗಿ, ಚದರ ಮೀಟರ್ ಎಂದು ನಮೂದಿಸಿ ಕಛೇರಿ ಪ್ರತಿಯಲ್ಲಿ ಚದರ ಅಡಿ ಎಂದು ತಿದ್ದಿ ಪುರಸಭೆಗೆ ರೂ.26,95,481/- ನಷ್ಟವುಂಟಾಗಲು ಕಾರಣರಾದ, ಹಾಗೂ ಕಡತ ಸಂಖ್ಯೆ: ವನಇ 180 ಟಿಎಂಡಿ 95ರ 2 ಟಿಪ್ಪಣಿ ಹಾಳೆಗಳನ್ನು ಹರಿದು ಹಾಕಿದ ಆರೋಪಕ್ಕಾಗಿ ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್. ಹಿರೇಮಠ, ಅಧೀನ ಕಾರ್ಯದರ್ಶಿಗಳು ಹಾಗೂ ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರವರುಗಳಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 29.4.2004ರ ನೋಟೀಸ್‌ಗಳನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

ಮೇಲೆ (2-3-4) ರಲ್ಲಿ ಓದಲಾದ ದಿನಾಂಕ: 10.12.2004 ಮತ್ತು 20.12.2004 ಗಳನ್ನು ನೀಡಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಆರೋಪಿತರ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13ರೊಡನೆ ಓದಿಕೊಂಡಂತೆ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ.ಬಿ. ಗಣಾಚಾರಿ, ಸರ್ಕಾರದ ಅಧೀನ ಕಾರ್ಯದರ್ಶಿಗಳು, ಶ್ರೀ ಎಸ್.ಆರ್. ಹಿರೇಮಠ, ಸರ್ಕಾರದ ಅಧೀನ ಕಾರ್ಯದರ್ಶಿಗಳು ಹಾಗೂ ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕರುಗಳ ವಿರುದ್ಧ, ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ಮಾಡುವ ಸಲುವಾಗಿ ಶ್ರೀ ಹೆಚ್.ಪಿ. ದೇಸಿಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ಈ ಮೂಲಕ ನೇಮಿಸುತ್ತದೆ.

ಈ ವಿಚಾರಣೆಯನ್ನು 3 ತಿಂಗಳೊಳಗೆ ಪೂರ್ತಿಗೊಳಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವುದು. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 03 ಸೇಇವಿ 96 ದಿನಾಂಕ: 24.4.1998 ರಂತೆ ರೂ.5000/- ಗೌರವ ಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕೆ.ಸಿ.ಎಸ್.ಆರ್. (ಸಿ.ಸಿ.ಎ.) ನಿಯಮ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಟಿ. ರಂಗನಾಥ, ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆರವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ, ಲೇಖನ ಸಾಮಗ್ರಿ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು ರವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 553

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಮುನಿಶಾಮಯ್ಯ, ಕೆಎಎಸ್ (ನಿಧನ) ಅವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ: ಸಿಆಸುಇ 111 ಎಸ್‌ಇಎನ್ 2000, ದಿನಾಂಕ: 7.12.2001.
2. ನೋಟೀಸ್ ಸಂಖ್ಯೆ: ಸಿಆಸುಇ 111 ಎಸ್‌ಇಎನ್ 2000 ದಿನಾಂಕ: 9.1.2002.
3. ಆದೇಶ ಸಂಖ್ಯೆ: ಸಿಆಸುಇ 231 ಎಸ್‌ಕೆಟಿ 2002, ದಿನಾಂಕ: 31.5.2003.
4. ಆದೇಶ ಸಂಖ್ಯೆ: ಸಿಆಸುಇ 111 ಎಸ್‌ಇಎನ್ 2000, ದಿನಾಂಕ: 22.9.2004.

**ಪ್ರಸ್ತಾವನೆ:**

ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ಸಹಾಯಕ ಆಯುಕ್ತರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಕೆಲವೊಂದು ಮುಗ್ಧ ಜನರಿಗೆ ನಿವೇಶನ, ಜಮೀನು ಕೊಡಿಸುವ ನೆಪದಲ್ಲಿ ಅವರಿಂದ ಲಕ್ಷಾಂತರ ರೂಪಾಯಿಗಳನ್ನು ಪಡೆದು ಅವರಿಗೆ ಜಮೀನು ನೀಡದೆ ಹಣವನ್ನು ಸಹ ಹಿಂದಿರುಗಿಸದೆ ವಂಚಿಸಿರುವ ಪ್ರಕರಣದ ಸಂಬಂಧ ಶ್ರೀ ಮುನಿಶಾಮಯ್ಯ, ಕೆಎಎಸ್ ಅವರನ್ನು ಮೇಲೆ (1) ರಲ್ಲಿ ಓದಲಾದ ದಿನಾಂಕ: 7.12.2001ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಯಿತು. ತದನಂತರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರನ್ವಯ ಮೇಲೆ (2) ರಲ್ಲಿ ಓದಲಾದ ದಿನಾಂಕ: 9.1.2002ರ ನೋಟೀಸನ್ನು ಜಾರಿ ಮಾಡುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ಅಧಿಕಾರಿಯವರನ್ನು ಮೇಲೆ (3) ರಲ್ಲಿ ಓದಲಾದ ದಿನಾಂಕ: 31.5.2003ರ ಆದೇಶದಲ್ಲಿ ಅವರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಯಿತು. ಸದರಿ ಅಧಿಕಾರಿಯವರು ದಿನಾಂಕ: 30.11.2003 ರಂದು ಅಕಾಲಿಕವಾಗಿ ಮರಣ ಹೊಂದಿದ್ದರ ಪ್ರಯುಕ್ತ ಮೇಲೆ (4) ರಲ್ಲಿ ಓದಲಾದ ದಿನಾಂಕ: 22.9.2004 ರಂದು ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶ ಹೊರಡಿಸಲಾಗಿದೆ. ಶ್ರೀ ಮುನಿಶಾಮಯ್ಯ, ಕೆಎಎಸ್ (ನಿಧನ) ಅವರು ವಿಚಾರಣೆ ಬಾಕಿಯಿರುವಾಗಲೇ ನಿಧನ ಹೊಂದಿದ್ದರಿಂದ ಅವರ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100 ರಡಿ ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2005**

ಮೇಲೆ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(2) ರನ್ವಯ ಶ್ರೀ ಮುನಿಶಾಮಯ್ಯ, ಕೆಎಎಸ್ (ನಿಧನ) ಅವರು ಅಮಾನತ್ತಿನಲ್ಲಿ ಕಳೆದ ದಿನಾಂಕ: 7.12.2001 ರಿಂದ 31.5.2003 ರವರೆಗಿನ (ಎರಡೂ ದಿನಗಳು ಸೇರಿದಂತೆ) ಅವಧಿಯನ್ನು ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 564

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ: ಸಿಆಸುಇ 107 ಎಸ್‌ಇಎನ್ 94, ದಿನಾಂಕ: 27.4.2004.
2. ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ಲಿಖಿತ ಉತ್ತರ ದಿನಾಂಕ: 25.6.2004.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಮೈಸೂರು ಜಿಲ್ಲೆ ಯಳಂದೂರು ತಾಲ್ಲೂಕು ಕೆ. ದೇವರಹಳ್ಳಿ ಗ್ರಾಮದ ಸರ್ವೆ ನಂ.4, 5, 6 ಮತ್ತು ಚಾಮರಾಜನಗರ ತಾಲ್ಲೂಕು ಸಂತೆಮಾರಹಳ್ಳಿ ಹೋಬಳಿ ಮೇಲ್ಮಾಳ ಗ್ರಾಮದ ಸರ್ವೆ ನಂ.248 ಮತ್ತು ತಿಮ್ಮೇಗೌಡನ ಪಾಳ್ಯ ಗ್ರಾಮದ ಸರ್ವೆ ನಂ.55ರ ಪ್ರದೇಶವನ್ನು ರಕ್ಷಿತ ಅರಣ್ಯ ಪ್ರದೇಶವಾಗಿ ಘೋಷಿಸಲು ಮೀಸಲಿಟ್ಟ ಸರ್ಕಾರಕ್ಕೆ ಸೇರಿದ ಬೆಲೆ ಬಾಳುವ ಜಮೀನುಗಳನ್ನು ಅಕ್ರಮವಾಗಿ ಖಾಸಗಿ ವ್ಯಕ್ತಿಗಳಿಗೆ ನೀಡಿರುವ ಆರೋಪದ ಸಂಬಂಧ ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ, ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 27.4.2004ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ರನ್ವಯ ಜಾರಿ ಮಾಡುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸಿಗೆ ಆರೋಪಿತರು ಮೇಲೆ (2) ರಲ್ಲಿ ಓದಲಾದ ದಿನಾಂಕ: 25.6.2004ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ಸಾರಸಗಟಾಗಿ ತಿರಸ್ಕರಿಸುತ್ತಾರೆ. ಅವರು ಸಲ್ಲಿಸಿದ ತಮ್ಮ ಉತ್ತರದಲ್ಲಿ ಮನಗಾಣದಂತಹ ಅಂಶಗಳು ಇರುವುದರಿಂದ ಅವರ ವಿರುದ್ಧದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿರುವ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 107 ಎಸ್‌ಇಎನ್ 94, ಬೆಂಗಳೂರು, ದಿನಾಂಕ: 19ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214 ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (2) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮ್ಮದ್ ಗೌಸ್, ನಿವೃತ್ತ ಕೆಎಎಸ್ ಅಧಿಕಾರಿ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ದೇಸಿಗೌಡ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 3 ಸೇಇವಿ 96, ದಿನಾಂಕ: 24.4.98 ಹಾಗೂ ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಲ್ಲಿ ನಿಗದಿ ಪಡಿಸಿರುವಂತೆ ಗೌರವಧನ ಹಾಗೂ ಪ್ರಯಾಣ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅಗತ್ಯ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 565

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು ಕೋಶಗಳ ಕಾರ್ಯಗಳ ಮರುಹಂಚಿಕೆ ಬಗ್ಗೆ.

**ಓದಲಾಗಿದೆ:**
1. ಶಿಕ್ಷಣ ಇಲಾಖೆಯ ಕಡತ ಸಂಖ್ಯೆ: ಇಡಿ (ಎಲ್‌ಸಿ) 328/2005.
2. ಕಾರ್ಯದರ್ಶಿ, ಕಾನೂನು ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಕಾನೂನು 2186/100/05, ದಿನಾಂಕ: 22.1.2005.
3. ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಒಇ 8 ಪಿಸಿಎನ್ 2005, ದಿ: 21.2.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಶಿಕ್ಷಣ ಇಲಾಖೆಯ ಕಡತ ಸಂಖ್ಯೆ: ಇಡಿ (ಎಲ್‌ಸಿ) 328/2005 ರಲ್ಲಿ ಶಿಕ್ಷಣ ಇಲಾಖೆಯ ಕಾರ್ಯದರ್ಶಿಯವರು, ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳಲ್ಲಿ ಕಾನೂನು ಕೋಶಗಳಲ್ಲಿ ಬಾಕಿ ಇರುವ ಪ್ರಕರಣಗಳ ವಿವರಗಳನ್ನು ನೀಡುತ್ತಾ, ಇದರಲ್ಲಿ ಶಿಕ್ಷಣ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗಳ ಕಾನೂನು ಕೋಶದಲ್ಲಿ ಇತರ ಎಲ್ಲಾ ಇಲಾಖೆಗಳ ಕಾನೂನು

ಕೋಶಗಳಿಗಿಂತ ಹೆಚ್ಚು ಪ್ರಕರಣಗಳು ಬಾಕಿ ಇರುತ್ತವೆಂದು (ಒಟ್ಟು 9,756 ಪ್ರಕರಣಗಳಿದ್ದು, ಇದರಲ್ಲಿ ಶಿಕ್ಷಣ ಇಲಾಖೆಯ 7,664 ಪ್ರಕರಣಗಳು ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ 2,092 ಪ್ರಕರಣಗಳು) ತಿಳಿಸಿ, ಈ ಬಾಕಿ ಪ್ರಕರಣಗಳ ಶೀಘ್ರ ವಿಲೇವಾರಿ ದೃಷ್ಟಿಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯನ್ನು ಈ ಕಾನೂನು ಕೋಶದಿಂದ ಬೇರ್ಪಡಿಸಿ ಕಾರ್ಯ ಒತ್ತಡ ಕಡಿಮೆ ಇರುವ ಬೇರೆ ಯಾವುದಾದರು ಇಲಾಖೆಯ ಕಾನೂನು ಕೋಶಕ್ಕೆ ಸೇರ್ಪಡೆ ಮಾಡುವಂತೆ ಪ್ರಸ್ತಾಪಿಸಿರುತ್ತಾರೆ.

ಕಾರ್ಯದರ್ಶಿ, ಕಾನೂನು ಇಲಾಖೆ ಇವರು ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 22.1.2005ರ ಟಿಪ್ಪಣಿಯಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾನೂನು ಕೋಶದಲ್ಲಿ ಕೆಲಸ ಕಡಿಮೆ ಇರುವುದರಿಂದ ಆ ಕಾನೂನು ಕೋಶದ ಮುಖ್ಯಸ್ಥರ ಹುದ್ದೆಯನ್ನು ಮೇಲ್ದರ್ಜೆಗೇರಿಸಿ ಆ ಕಾನೂನು ಕೋಶದ ಕೆಲಸವನ್ನು ಗೃಹ ಮತ್ತು ಸಾರಿಗೆ ಇಲಾಖೆಯ ಕಾನೂನು ಕೋಶಕ್ಕೆ ವಹಿಸುವ ಬಗ್ಗೆ ಆದೇಶಿಸುವಂತೆ ಕೋರಿರುತ್ತಾರೆ.

ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ ಇವರೂ ಸಹ ಕ್ರಮ ಸಂಖ್ಯೆ (3) ರಲ್ಲಿ ಓದಲಾದ 21.2.2005ರ ಟಿಪ್ಪಣಿಯಲ್ಲಿ ಕಾರ್ಯದರ್ಶಿ, ಕಾನೂನು ಇಲಾಖೆ ಇವರು ಪ್ರಸ್ತಾಪಿಸಿರುವಂತೆ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಕಾನೂನು ಕೋಶದ ಕೆಲಸವನ್ನು ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಕಾನೂನು ಕೋಶಕ್ಕೆ ವಹಿಸುವ ಬಗ್ಗೆ ಆದೇಶಿಸುವಂತೆ ಕೋರಿರುತ್ತಾರೆ.

ಆದುದರಿಂದ, ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳ ಕಾನೂನು ಕೋಶಗಳ ಕಾರ್ಯ ಒತ್ತಡವನ್ನು ಸರಿದೂಗಿಸುವ ದೃಷ್ಟಿಯಿಂದ ಈ ಕಾನೂನು ಕೋಶಗಳ ಕಾರ್ಯವನ್ನು ಮರು ಹಂಚಿಕೆ ಮಾಡುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 92 ಸಆಸೇ 2005, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ವಿವಿಧ ಇಲಾಖೆಗಳ ಕಾನೂನು ಕೋಶಗಳ ಕಾರ್ಯಭಾರವನ್ನು ಈ ಕೆಳಕಂಡಂತೆ ಮರು ಹಂಚಿಕೆ ಮಾಡಲಾಗಿದೆ.

| ಕ್ರಮ ಸಂಖ್ಯೆ | ಪ್ರಸ್ತುತ ಕಾನೂನು ಕೋಶದ ಹೆಸರು | ಪ್ರಸಕ್ತ ಇರುವ ಕಾರ್ಯ ಹಂಚಿಕೆ | ಪರಿಷ್ಕೃತ ಕಾರ್ಯ ಹಂಚಿಕೆ |
|---|---|---|---|
| 1 | ಗ್ರಾ.ಅ. ಮತ್ತು ಪಂ.ರಾ. ಇಲಾಖೆ ಸಮಾಜ ಕಲ್ಯಾಣ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಳ ಕಾನೂನು ಕೋಶ | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆಗಳು. |
| 2 | ಸಹಕಾರ-ಕೃಷಿ ಮತ್ತು ತೋಟಗಾರಿಕೆ ಹಾಗೂ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗಳ ಕಾನೂನು ಕೋಶ | ಸಹಕಾರ-ಕೃಷಿ ಮತ್ತು ತೋಟಗಾರಿಕೆ ಹಾಗೂ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ. | ಸಹಕಾರ-ಕೃಷಿ ಮತ್ತು ತೋಟಗಾರಿಕೆ ಹಾಗೂ ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ. ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗಳು. |
| 3 | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕಾನೂನು ಕೋಶ | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಪ್ರಕರಣಗಳು | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಕಾನೂನು ಕೋಶವನ್ನು ಕಾನೂನು ಕೋಶ (ಪ್ರಾಥಮಿಕ ಶಿಕ್ಷಣ) ಶಿಕ್ಷಣ ಇಲಾಖೆಯೆಂದು ಮರುಪದ ನಾಮೀಕರಿಸಿದೆ, ಹಾಗೂ ಈ ಕೋಶಕ್ಕೆ ಶಿಕ್ಷಣ ಇಲಾಖೆಯ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದ ಪ್ರಕರಣಗಳನ್ನು ಮಾತ್ರ ವಹಿಸಲಾಗಿದೆ. |
| 4 | ಶಿಕ್ಷಣ ಇಲಾಖೆಯ ಕಾನೂನು ಕೋಶ | ಶಿಕ್ಷಣ ಇಲಾಖೆ (ಪ್ರಾ.ಉ) ಆ.ಕು.ಕ.ಇಲಾಖೆ | ಶಿಕ್ಷಣ ಇಲಾಖೆಯ ಪ್ರೌಢ ಮತ್ತು ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದ ಪ್ರಕರಣಗಳನ್ನು ವಹಿಸಲಾಗಿದೆ. ಹಾಗೂ ಈ ಕಾನೂನು ಕೋಶವನ್ನು ಕಾನೂನು ಕೋಶ (ಉನ್ನತ ಶಿಕ್ಷಣ) ಶಿಕ್ಷಣ ಇಲಾಖೆ ಎಂದು ಮರು ಪದನಾಮೀಕರಿಸಿದೆ. |
| 5 | ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಕಾನೂನು ಕೋಶ | ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಪ್ರಕರಣಗಳು | ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಪ್ರಕರಣಗಳು. ರೇಷ್ಮೆ-ಜವಳಿ-ವಾ. ಮತ್ತು ಕೈ-ಸಕ್ಕರೆ-ಯೋಜನೆ-ಐ.ಟಿ. ಮತ್ತು ಬಿ.ಟಿ.-ಡಿ.ಡಿ.ಪಿ.ಇ.ಆರ್. |

ಈ ಕಾರ್ಯ ಮರು ಹಂಚಿಕೆಯ ಬಗ್ಗೆ ಕರ್ನಾಟಕ ಸರ್ಕಾರ ಸಚಿವಾಲಯ (ವ್ಯವಹಾರ ಹಂಚಿಕೆ) ನಿಯಮಗಳಿಗೆ ತಿದ್ದುಪಡಿ ತರುವ ಬಗ್ಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-2)

ಪಿ.ಆರ್. 595

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ)ಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 11 ಎಸ್‌ಜಿಬಿ 2000 ದಿನಾಂಕ: 14.3.2000.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸಆಸೇ 2000. ದಿನಾಂಕ: 29.7.2000.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 7 ಸಸಿವಿ 2001, ದಿನಾಂಕ: 20.3.2001.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2002, ದಿನಾಂಕ: 6.4.2002.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಆಸೇ 2001, ದಿನಾಂಕ: 23.4.2002.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಆಸೇ 2001, ದಿನಾಂಕ: 12.8.2002.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಆಸೇ 2001, ದಿನಾಂಕ: 31.10.2002.
8. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 58 ಸಸಿವಿ 2003, ದಿನಾಂಕ: 24.5.2004.
9. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 1190 ಲೆಪ ಐಆರ್‌ಎಲ್‌ಎ 2005, ದಿನಾಂಕ: 16.3.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 14.3.2000ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು, ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು ಹಾಗೂ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ ಪಾವತಿ ಹಾಗೂ ಇತರೆ ವ್ಯಕ್ತಿಗತ ಕ್ಲೇಮ್‌ಗಳ ಪರಿಶೀಲನೆ ಪಾವತಿ ಸಲುವಾಗಿ ಈ ಕೆಳಕಂಡ ಅಧಿಕಾರಿ : ಸಿಬ್ಬಂದಿಗಳನ್ನು ಒಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| ಅ. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| ಆ. | ಶಾಖಾಧಿಕಾರಿ | 1 |
| ಇ. | ಅಕೌಂಟ್ಸ್ ಅಸಿಸ್ಟೆಂಟ್ | 1 |
| ಈ. | ಸಹಾಯಕ | 2 |
| ಉ. | ಕಿರಿಯ ಸಹಾಯಕ | 1 |
| ಊ. | ಶೀಘ್ರಲಿಪಿಗಾರರು | 1 |
| ಋ. | ಕ್ಯಾಷಿಯರ್ | 1 |
| ೠ. | ತಾಂತ್ರಿಕ ಸಹಾಯಕರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| ಎ. | ದಲಾಯತ್ | 1 |

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 29.7.2000ದ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್‌ಗಳ ಹುದ್ದೆಯನ್ನು ಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ. ಹಾಗೂ ಎರಡು ಸಹಾಯಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ. ಕ್ರಮ ಸಂಖ್ಯೆ (3) ಮತ್ತು (4) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಹುದ್ದೆಗಳನ್ನು ದಿನಾಂಕ: 13.3.2003 ರವರೆಗೆ ವಿಸ್ತರಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 23.4.2002ರ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಅಧಿಕ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

| | | |
|---|---|---|
| ಅ. | ಡಾಟಾ ಎಂಟ್ರಿ ಆಪರೇಟರ್ | 1 |
| ಆ. | ಸಹಾಯಕ | 1 |
| ಇ. | ಬೆರಳಚ್ಚುಗಾರ | 1 |

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 12.8.2002ರ ಸರ್ಕಾರದ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಅಲ್ಲದೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 30.10.2002ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆ ಎಂದು ಮರು ಪದನಾಮೀಕರಿಸಲಾಗಿರುತ್ತದೆ.

ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಇವರು ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ದಿನಾಂಕ: 16.3.2005ರ ಅನಧಿಕೃತ ಟಿಪ್ಪಣಿಯಲ್ಲಿ ಐ.ಆರ್.ಎಲ್.ಎ. ಶಾಖೆಯ ಹುದ್ದೆಗಳನ್ನು ದಿನಾಂಕ: 14.3.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2005, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 14.3.2005 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2. | ಶಾಖಾಧಿಕಾರಿ | 1 |
| 3. | ತಾಂತ್ರಿಕ ಸಹಾಯಕರು : ವಿಶೇಷಾಧಿಕಾರಿ (ವೇ.ಶ್ರೇ.ರ) | 1 |

| | | |
|---|---|---|
| 4. | ಹಿರಿಯ ಸಹಾಯಕರು | 1 |
| 5. | ಸಹಾಯಕರು | 3 |
| 6. | ಕಿರಿಯ ಸಹಾಯಕರು | 1 |
| 7. | ಶೀಘ್ರಲಿಪಿಗಾರರು | 1 |
| 8. | ಕ್ಯಾಷಿಯರ್ | 1 |
| 9. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 1 |
| 10. | ಡಾಟಾ ಎಂಟ್ರಿ ಆಪರೇಟರ್ | 1 |
| 11. | ಬೆರಳಚ್ಚುಗಾರರು | 1 |
| 12. | ದಲಾಯತ್ (ದಲಾಯತ್-1 + ಆಫೀಸ್ ಆರ್ಡರ್ಲಿ-1) | 2 |
| | ಒಟ್ಟು | 15 |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 596 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-2)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಪಾರೀಶ್ ಎ. ಗುಂಡಪ್ಪನವರ್ ಇವರಿಗೆ ಪರ್ಯಾಯವಾಗಿ ಸಿ.ಟಿ.ಎಸ್. ನಂ.9647 ಸೆಕ್ಟಾರ್ ನಂ.11, ಮಾಳಮಾರುತಿ ಬಡಾವಣೆ, ಬೆಳಗಾಂ ಇಲ್ಲಿ ಪರ್ಯಾಯ ನಿವೇಶನಕ್ಕೆ ಕ್ರಯ ಪತ್ರ ಮಾಡಿಕೊಡುವ ಬಗ್ಗೆ.

**ಓದಲಾಗಿದೆ:** ಬೆಳಗಾಂ ಮಹಾನಗರ ಪಾಲಿಕೆಯ ಆಯುಕ್ತರ ಕಛೇರಿಯ ಪತ್ರ ಸಂಖ್ಯೆ: ಸಿಸಿಬಿ/ಆರ್‌ಡಿ/ಎಂಪಿ/29/2004-05, ದಿನಾಂಕ: 22.03.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಬೆಳಗಾಂ ಮಹಾನಗರ ಪಾಲಿಕೆ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬೆಳಗಾಂ ಮಹಾನಗರ ಪಾಲಿಕೆಯ ಸಿ.ಟಿ.ಎಸ್. ನಂ.732, ಸಿ.ಡಿ. ದೇಶಮುಖ್ ರಸ್ತೆ (ಕಾಂಗ್ರೆಸ್ ರಸ್ತೆ) ತಿಲಕವಾಡಿಯಲ್ಲಿರುವ 3.8 ಗುಂಟೆ ಅಂದರೆ 3817 ಚದರ ಅಡಿ ಜಾಗವು ಶ್ರೀ ಪಾರೀಶ್ ಎ. ಗುಂಡಪ್ಪನವರ್ ಎಂಬುವವರಿಗೆ ಸೇರಿದ್ದು, ಬೆಳಗಾಂ ಮಹಾನಗರ ಪಾಲಿಕೆಯು ರಸ್ತೆಯನ್ನು ವಿಸ್ತರಿಸಲು ಸದರಿ ಜಾಗವನ್ನು ಪಾಲಿಕೆಯು ಸ್ವಾಧೀನಪಡಿಸಿಕೊಂಡಿದ್ದು ಇದಕ್ಕಾಗಿ ಶ್ರೀ ಪಾರೀಶ್ ಎ. ಗುಂಡಪ್ಪನವರ್ ರವರಿಗೆ ಪರಿಹಾರವನ್ನು ನೀಡಿರುವುದಿಲ್ಲ. ಈಗ ಶ್ರೀ ಪಾರೀಶ್ ಎ. ಗುಂಡಪ್ಪನವರ್ ರವರು ತಮಗೆ ಮೇಲ್ಕಂಡ ನಿವೇಶನದ ಬದಲು ಬೇರೊಂದು ನಿವೇಶನವನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ. ಅದರಂತೆ ಬೆಳಗಾವಿ ನಗರದ ಮಾಳಮಾರುತಿ ಬಡಾವಣೆ ಸಿ.ಟಿ.ಎಸ್. ನಂ.9647 ಸೆಕ್ಟರ್ ನಂ.11 ರಲ್ಲಿರುವ 6 ಗುಂಟೆ ಜಾಗವನ್ನು ಶ್ರೀ ಪಾರೀಶ್ ಎ. ಗುಂಡಪ್ಪನವರ್ ರವರಿಗೆ ಈಗಾಗಲೇ 5 ವರ್ಷಗಳಿಗೆ ಲೀಜ್ ಆಧಾರದ ಮೇಲೆ ನೀಡಿದ್ದು ಸದರಿಯವರು ನೀಡಿರುವ ಜಾಗದ ವಿಸ್ತೀರ್ಣ 3817 ಚದರ ಅಡಿಯಾಗಿದ್ದು ಪಾಲಿಕೆಯು ಹಂಚಿಕೆ ಮಾಡಿರುವ ಜಾಗದ ಅಳತೆ 6 ಗುಂಟೆ (ಆರು ಗುಂಟೆ) ಆಗಿರುತ್ತದೆ. ಅರ್ಜಿದಾರರ ಜಾಗದ ಬೆಲೆ ರೂ.11,67,124-00 ಆಗಿದ್ದು ಹಾಲಿ ಮಾರುಕಟ್ಟೆ ದರ ಚದರ ಅಡಿಗೆ ರೂ.305-77 ಆಗಿರುತ್ತದೆ ಮತ್ತು ಪಾಲಿಕೆ ಮಂಜೂರು ಮಾಡಿರುವ ಪರ್ಯಾಯ ಜಾಗದ ಬೆಲೆ ಚದರಡಿಗೆ ರೂ.155.55 ಆಗಿದ್ದು ಒಟ್ಟು ಮೌಲ್ಯ ರೂ.10,16,364-00 ಆಗಿರುತ್ತದೆ. ಆದ್ದರಿಂದ ಮೇಲ್ಕಂಡ ನಿವೇಶನವನ್ನು ಶ್ರೀ ಪಾರೀಶ್ ಎ. ಗುಂಡಪ್ಪನವರ್ ರವರಿಗೆ ನಾಮ ಮಾತ್ರದ ಮಾರಾಟಕ್ಕೆ ಈ ಜಾಗವನ್ನು ಪರ್ಯಾಯವಾಗಿ ನೀಡಿ ಕ್ರಯ ಪತ್ರ ಮಾಡಿಕೊಡಲು ಸರ್ಕಾರದ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ.

ಬೆಳಗಾವಿ ಮಹಾನಗರ ಪಾಲಿಕೆಯ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 83 ಎಸಿಬಿ 2005, ಬೆಂಗಳೂರು, ದಿನಾಂಕ: 6ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಮಹಾನಗರ ಪಾಲಿಕೆಯು ಶ್ರೀ ಪಾರೀಶ್ ಎ. ಗುಂಡಪ್ಪನವರ್ ಇವರು ರಸ್ತೆ ಅಗಲೀಕರಣದಲ್ಲಿ ಕಳೆದುಕೊಂಡಿರುವ ಜಾಗಕ್ಕೆ ಪರ್ಯಾಯವಾಗಿ ಮಾಳಮಾರುತಿ ಬಡಾವಣೆ, ಬೆಳಗಾಂನಲ್ಲಿನ ಸಿ.ಟಿ.ಎಸ್. ನಂ.9647 ಸೆಕ್ಟಾರ್ ನಂ.11 ರಲ್ಲಿ ಗುತ್ತಿಗೆ ಆಧಾರದ ಮೇಲೆ ನೀಡಿರುವ 6 ಗುಂಟೆ (ಆರು ಗುಂಟೆ) ನಿವೇಶನವನ್ನು ನಾಮ ಮಾತ್ರದ ಮಾರಾಟಕ್ಕೆ (Nominal Sale) ಶ್ರೀ ಪಾರೀಶ್ ಎ. ಗುಂಡಪ್ಪನವರ್ ಇವರಿಗೆ ಕ್ರಯ ಪತ್ರ ಮಾಡಿಕೊಡಲು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1. ಸದರಿ ನಿವೇಶನವನ್ನು ಮಂಜೂರು ಮಾಡಿದ ನಂತರ ಈಗಾಗಲೇ ರಸ್ತೆ ಅಗಲೀಕರಣಕ್ಕೆ ಬಿಟ್ಟುಕೊಟ್ಟಿರುವ ಹಾಗೂ ಈಗ ನೀಡುತ್ತಿರುವ ನಿವೇಶನದ ವ್ಯತ್ಯಾಸದ ಹಣವನ್ನು ಅರ್ಜಿದಾರರಿಗೆ ಪಾವತಿಸಬಾರದು.
2. ಈ ಬಗ್ಗೆ ಯಾವುದೇ ಕಾರಣಕ್ಕೂ ಅರ್ಜಿದಾರರು ವ್ಯವಹರಿಸಬಾರದು ಮತ್ತು ವ್ಯತ್ಯಾಸದ ಹಣವನ್ನು ಕೇಳಬಾರದು ಎಂಬ ಮುಚ್ಚಳಿಕೆಯನ್ನು ಅರ್ಜಿದಾರರಿಂದ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್. 640 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಗದಗ ತಾಲ್ಲೂಕು ಪಂಚಾಯತಿ ಸಂಖ್ಯೆ 15 ಸೊರಟೂರು ಕ್ಷೇತ್ರ ಚುನಾವಣೆಯಲ್ಲಿ ಚುನಾವಣಾಧಿಕಾರಿಗಳಾಗಿ ಕಾರ್ಯ ನಿರ್ವಹಿಸಿದ ಶ್ರೀ ಕೆ.ಹೆಚ್. ಓಬಳಪ್ಪ ಹಾಗೂ ಶ್ರೀ ಆರ್.ಬಿ. ದಾಸರ್ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ನಡೆಸುವ ಬಗ್ಗೆ.

**ಓದಲಾಗಿದೆ:**
1. ರಾಜ್ಯ ಚುನಾವಣಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ: ರಾಚುಆ:10:ಟಿಜಿಡ್‌ಪಿ:2004 ದಿ: 6.3.2004.
2. ನಿರ್ದೇಶಕರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ ಇವರ ಪತ್ರ ಸಮ: ನಿಪಸಂ/ಜಾಗ್ರತಾ/ವಿವ-21/ 2004-2005, ದಿನಾಂಕ: 28.8.2004.
3. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 236 ಎಸ್‌ಜೆಡಿ 2004 ದಿನಾಂಕ: 02.11.2004 ಹಾಗೂ 5.11.2004.
4. ಕಾರಣ ಕೇಳುವ ನೋಟೀಸಿಗೆ ಉತ್ತರ ಸಲ್ಲಿಸಿರುವ ದಿನಾಂಕ: 25.11.2004 ಹಾಗೂ 13.1.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ: 6.3.2004 ಪತ್ರದಲ್ಲಿ ರಾಜ್ಯ ಚುನಾವಣಾ ಆಯೋಗ ಬೆಂಗಳೂರುರವರು ಸೊರಟೂರು ತಾಲ್ಲೂಕು ಪಂಚಾಯಿತಿ ಕ್ಷೇತ್ರದ ಎಣಿಕೆಯನ್ನು ದಿನಾಂಕ: 8.6.2000 ರಂದು ನಡೆಸಲಾಗಿರುತ್ತದೆಂದು, ಈ ಚುನಾವಣೆಯಲ್ಲಿ ಅಭ್ಯರ್ಥಿಗಳಾದ ಕಮ್ಮಾರ ದ್ಯಾಮವ್ವ ರಾಮಪ್ಪ ಹಾಗೂ ಮೇಗೂರು ರೇಖಾ ಬಸವರಾಜ ಈ ಅಭ್ಯರ್ಥಿಗಳಿಗೆ ಹಾಕಿದ ಎಣಿಕೆಗಳಲ್ಲಿ ಶ್ರೀಮತಿ ರೇಖಾ ಬಸವರಾಜ ರವರಿಗೆ 2334 ಮತಗಳು ಹಾಗೂ ಶ್ರೀಮತಿ ದ್ಯಾಮವ್ವ ರಾಮಪ್ಪ ರವರಿಗೆ 2289 ಮತಗಳು ಪಡೆದಿರುತ್ತಾರೆಂದು ಶ್ರೀಮತಿ ರೇಖಾ ಬಸವರಾಜರವರನ್ನು ಚುನಾಯಿತ ಸದಸ್ಯರೆಂದು ಘೋಷಿಸಿರುತ್ತಾರೆ. ಈ ಚುನಾವಣೆಯಲ್ಲಿ ಸೋತ ಅಭ್ಯರ್ಥಿಯಾದ ಶ್ರೀಮತಿ ದ್ಯಾಮವ್ವ ರಾಮಪ್ಪ ಇವರು ಮರು ಎಣಿಕೆಯನ್ನು ಮಾಡಬೇಕೆಂದು ಕೋರಿರುವ ಹಿನ್ನೆಲೆಯಲ್ಲಿ ಚುನಾವಣಾಧಿಕಾರಿಗಳು ಮರು ಎಣಿಕೆ ಮಾಡಲಿಲ್ಲವೆಂದು ಇದರ ವಿರುದ್ಧವಾಗಿ ಸೀನಿಯರ್ ಡಿವಿಜನ್ ನ್ಯಾಯಾಲಯದಲ್ಲಿ ಫಿರ್ಯಾದು ದಾವೆ ಹೂಡಿದ ಮೇರೆಗೆ ಸದರಿ ನ್ಯಾಯಾಲಯವು ಮರು ಎಣಿಕೆ ಮಾಡಲು ಆದೇಶಿಸಿರುತ್ತದೆ. ತದನಂತರ ಮರು ಎಣಿಕೆಯಲ್ಲಿ ಸೋತ ಅಭ್ಯರ್ಥಿಯಾದ ಶ್ರೀಮತಿ ದ್ಯಾಮವ್ವ ರಾಮಪ್ಪರವರು 2376 ಮತಗಳನ್ನು ಪಡೆದು ವಿಜೇತರಾಗಿರುವುದಾಗಿ ಹಾಗೂ ಶ್ರೀಮತಿ ರೇಖಾ ಬಸವರಾಜರವರು 2259 ಮತಗಳನ್ನು ಪಡೆದು ಸೋತಿರುವುದಾಗಿ ತಿಳಿಸಿರುತ್ತಾರೆ. ಈ ಚುನಾವಣೆಯಲ್ಲಿ ಚುನಾವಣಾಧಿಕಾರಿಗಳಾದ ಶ್ರೀ ಕೆ.ಹೆಚ್. ಓಬಳಪ್ಪ, ಪ್ರಸ್ತುತ ಉಪನಿರ್ದೇಶಕರು, ಮಮ.ಅ.ಇಲಾಖೆ, ಬೆಳಗಾಂ ಹಾಗೂ ಶ್ರೀ ಆರ್.ಬಿ. ದಾಸರ್, ಪ್ರಸ್ತುತ ಅಧೀಕ್ಷಕರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆ ಗದಗ್, ಇವರುಗಳು ಎಣಿಕೆಯಲ್ಲಿ ಬಹಳ ಗಂಭೀರವಾದ ತಪ್ಪನ್ನು ಮಾಡಿರುವುದು ರುಜುವಾತಾಗಿರುತ್ತದೆ. ಆದುದರಿಂದ ಚುನಾವಣಾಧಿಕಾರಿಗಳು ಸೋತ ಅಭ್ಯರ್ಥಿಯನ್ನು ಗೆಲ್ಲಿಸುವಂತಹ ಗುರುತರ ಅಪರಾಧವನ್ನು ಎಸಗಿರುತ್ತಾರೆಂದು ಈ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ: 28.8.2004ರ ಪತ್ರದಲ್ಲಿ ಶ್ರೀ ಆರ್.ಬಿ. ದಾಸರ್, ಅಧೀಕ್ಷಕರು, ಪಶುಪಾಲನಾ ಮತ್ತು ಪಶು ವೈದ್ಯ ಸೇವಾ ಇಲಾಖೆಗೆ ಸಂಬಂಧಪಟ್ಟವರಾದ್ದರಿಂದ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಸಕ್ಷಮ ಪ್ರಾಧಿಕಾರಿಗಳಾದ ಆ ಇಲಾಖೆಯ ನಿರ್ದೇಶಕರು ಸಹಮತಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ: 5.11.2004 ರಲ್ಲಿ ಕಾರಣ ಕೇಳುವ ನೋಟೀಸಿನಲ್ಲಿ ಜೂನ್ 2000 ರಲ್ಲಿ ಜಿಲ್ಲಾ ಪಂಚಾಯತ್ ಹಾಗೂ ತಾಲ್ಲೂಕು ಪಂಚಾಯತ್‌ಗಳಿಗೆ ನಡೆದ ಚುನಾವಣೆಗಳಲ್ಲಿ ಗದಗ್ ತಾಲ್ಲೂಕು ಸೊರಟೂರು ತಾಲ್ಲೂಕು ಪಂಚಾಯತ್ ಕ್ಷೇತ್ರದ ಎಣಿಕೆ ಕಾರ್ಯದಲ್ಲಿ ಚುನಾವಣಾಧಿಕಾರಿಗಳಾಗಿದ್ದ ಶ್ರೀ ಹೆಚ್.ಕೆ. ಓಬಳಪ್ಪ ಮತ್ತು ಮೇಲ್ವಿಚಾರಕರಾಗಿದ್ದು ಶ್ರೀ ಆರ್.ಬಿ. ದಾಸರ್, ಇವರು ಎಣಿಕೆ ಕಾರ್ಯದಲ್ಲಿ ಬಹಳ ಗಂಭೀರವಾದ ತಪ್ಪನ್ನು ಮಾಡಿರುವುದು ಮೇಲ್ನೋಟಕ್ಕೆ ರುಜುವಾತಾದ ಕಾರಣ ಇವರಿಬ್ಬರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 13ರ ಮೇರೆಗೆ ನಿಯಮ 11 ಅನ್ನು ಓದಿಕೊಂಡಂತೆ ಜಂಟಿ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ಉದ್ದೇಶಿಸಿ, ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(4)ರ ದಿನಾಂಕ: 25.11.2004 ಹಾಗೂ 13.1.2005 ರಲ್ಲಿ ಶ್ರೀ ಹೆಚ್.ಕೆ. ಓಬಳಪ್ಪ, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಗದಗ್ ಇವರು ಹಾಗೂ ಆರ್.ಬಿ. ದಾಸರ್, ಅಧೀಕ್ಷಕರು, ಪಶು ಸಂಗೋಪನಾ ಇಲಾಖೆ ಇವರುಗಳು ಕಾರಣ ಕೇಳುವ ನೋಟೀಸಿಗೆ ಉತ್ತರವನ್ನು ನೀಡಿರುತ್ತಾರೆ.

ಶ್ರೀ ಕೆ.ಹೆಚ್. ಓಬಳಪ್ಪ ಮತ್ತು ಶ್ರೀ ಆರ್.ಬಿ. ದಾಸರ್ ಇವರು ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರದಲ್ಲಿ ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆದಿರುವುದರಿಂದ ಈ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ಈ ಅಧಿಕಾರಿಗಳ ವಿರುದ್ಧ ಕೆಸಿಎಸ್ (ಸಿಸಿಎ) ನಿಯಮಗಳು 1957ರ ನಿಯಮ 13ರ ಮೇರೆಗೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ ಶ್ರೀ ಕೆ.ಆರ್. ಕೊಡಗನೂರು, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬಸವ ನಿಲಯ, ಫ್ಲಾಟ್ ನಂ.82 ಶಾಹುನಗರ ಬೆಳಗಾಂ ಇವರನ್ನು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಜಿಲ್ಲಾಧಿಕಾರಿಗಳ ಜಿಲ್ಲಾ ಸ್ಥಾನಿಕ ಸಹಾಯಕರು (Head Quarter Assistant) ಗದಗ್ ಜಿಲ್ಲೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 236 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2005**

ಜೂನ್ 2000 ಸಾಲಿನಲ್ಲಿ ನಡೆದ ತಾಲ್ಲೂಕು ಪಂಚಾಯತ್, ನಂ-15 ಸೊರಟೂರು ಕ್ಷೇತ್ರ ಚುನಾವಣೆಯಲ್ಲಿ ಶ್ರೀ ಕೆ.ಹೆಚ್. ಓಬಳಪ್ಪ, ಹಿಂದಿನ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಗದಗ್ ಇವರನ್ನು ಚುನಾವಣಾಧಿಕಾರಿಯನ್ನಾಗಿ ಹಾಗೂ ಶ್ರೀ ಆರ್.ಬಿ. ದಾಸರ್, ಅಧೀಕ್ಷಕರು, ಪಶುಸಂಗೋಪನಾ ಇಲಾಖೆ ಗದಗ್, ಇವರನ್ನು ಮೇಲ್ವಿಚಾರಕರನ್ನಾಗಿ ನೇಮಕ ಮಾಡಿದ ಸಂದರ್ಭದಲ್ಲಿ ಈ ಅಧಿಕಾರಿಗಳು ಚುನಾವಣೆಗೆ ನಿಂತ ಅಭ್ಯರ್ಥಿಗಳಲ್ಲಿ ಸೋತ ಅಭ್ಯರ್ಥಿಯನ್ನು ಗೆದ್ದ ಅಭ್ಯರ್ಥಿಯನ್ನಾಗಿ ಪ್ರಕಟಿಸಿ ಹಾಗೂ ಗೆದ್ದ ಅಭ್ಯರ್ಥಿಯನ್ನು ಸೋತ ಅಭ್ಯರ್ಥಿಯನ್ನಾಗಿ ಪ್ರಕಟಿಸಿದ

ಹಿನ್ನೆಲೆಯಲ್ಲಿ ಈ ಅಧಿಕಾರಿಗಳ ಮೇಲೆ ಚುನಾವಣಾ ಆಯೋಗ ಹೊರಿಸಿರುವ ಆರೋಪಗಳನ್ನು ಒಪ್ಪಿಕೊಳ್ಳದೇ ಅಲ್ಲಗಳೆದಿರುವುದರಿಂದ ಈ ಬಗ್ಗೆ ಸತ್ಯಾಸತ್ಯತೆಯನ್ನು ಕಂಡು ಹಿಡಿಯಲು ಕರ್ನಾಟಕ ನಾಗರೀಕ ಸೇವಾ (ನಡತೆ ವರ್ಗೀಕರಣ ಮತ್ತು ಮೇಲ್ಮನವಿ) 1957ರ ನಿಯಮ 13ರ ಮೇರೆಗೆ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಆದೇಶಿಸಿದೆ.

ಈ ಪ್ರಕರಣದಲ್ಲಿ ಶ್ರೀ ಕೆ.ಆರ್. ಕೊಡಗನೂರು ನಿವೃತ್ತ ಜಿಲ್ಲಾ ನ್ಯಾಯಾಧೀಶರು ಬಸವ ನಿಲಯ, ಫ್ಲಾಟ್ ನಂ.82, ಶಾಹುನಗರ ಬೆಳಗಾಂ ಇವನ್ನು ಇದೇ ನಿಯಮಾವಳಿಗಳ ನಿಯಮ 11(2)ರ ಮೇರೆಗೆ ವಿಚಾರಣಾಧಿಕಾರಿಗಳನ್ನಾಗಿಯೂ ಮತ್ತು ಇದೇ ನಿಯಮಾವಳಿ ನಿಯಮ 11(5)ರ ಮೇರೆಗೆ ಜಿಲ್ಲಾಧಿಕಾರಿಗಳ ಜಿಲ್ಲಾ ಸ್ಥಾನಿಕ ಸಹಾಯಕ (Head Quarter Assistant) ಗದಗ್ ಜಿಲ್ಲೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಪ್ರಾರಂಭಿಸಿದ 3 ತಿಂಗಳ ಒಳಗಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 643 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ:** ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ) ದೂರವಾಣಿನಗರ, ಬೆಂಗಳೂರು ಇವರ 2003-04 ಹಾಗೂ 2004-05ನೇ ಸಾಲಿನ ಸರ್ವಸದಸ್ಯರ ಸಭೆಯನ್ನು ಮುಂದೂಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1) ರಡಿ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮತ್ತು ಮಾನ್ಯ ಎ ಕೃಷ್ಣಪ್ಪ, ಮಾಜಿ ಸಚಿವರು ಹಾಗೂ ಶಾಸಕರು, ವರ್ತೂರು ಕ್ಷೇತ್ರ ಇವರುಗಳು ಮಾನ್ಯ ಸಹಕಾರ ಸಚಿವರಿಗೆ ಬರೆದಿರುವ ಪತ್ರ ಸಂಖ್ಯೆ: ಐ.ಟಿ.ಐ/ಇಹೆಚ್‌ಸಿಎಸ್/ ದಿನಾಂಕ: 21.02.2005 ಹಾಗೂ 30.03.2005.

**ಪ್ರಸ್ತಾವನೆ:**

ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ) ದೂರವಾಣಿನಗರ, ಬೆಂಗಳೂರು ಇದರ 2003-04ನೇ ವರ್ಷದ ಮಹಾಸಭೆಯನ್ನು ದಿನಾಂಕ: 31.03.2005 ರೊಳಗಾಗಿ ನಡೆಸಬೇಕಾಗಿದ್ದು, ಐ.ಟಿ.ಐ. ಕಾರ್ಖಾನೆಯ ಆಡಳಿತ ಮಂಡಳಿಯ ಉತ್ಪಾದನೆಯ ಕೊನೆಯ ತಿಂಗಳಾಗಿರುವುದರಿಂದ ಸದರಿ ಸಭೆಗೆ ಪರವಾನಗಿಯನ್ನು ನಿರಾಕರಿಸಿರುವ ಹಿನ್ನೆಲೆಯಲ್ಲಿ 2003-04ನೇ ಸಾಲಿನ ಮಹಾಸಭೆಯನ್ನು ಸೆಪ್ಟೆಂಬರ್ 2005ರ ಅಂತ್ಯದೊಳಗೆ ನಡೆಸಲು ಅವಕಾಶ ನೀಡಿ ಆದೇಶ ಮಾಡಬೇಕೆಂದು ಮೇಲೆ ಓದಲಾದ ಪತ್ರದಲ್ಲಿ ಸದರಿ ಸಂಘದ ಅಧ್ಯಕ್ಷರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಶವಾಗಿ ಪರಿಶೀಲಿಸಿ ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ) ದೂರವಾಣಿನಗರ, ಬೆಂಗಳೂರು ಇದರ ಆಡಳಿತಾತ್ಮಕ ಹಾಗೂ ಆರ್ಥಿಕ ಹಿತದೃಷ್ಟಿಯಿಂದ 2003-04ನೇ ಸಾಲಿನ ಮಹಾಸಭೆಯನ್ನು ದಿನಾಂಕ: 30.09.2005 ರೊಳಗೆ ನಡೆಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರನ್ವಯ ಪ್ರಕರಣ 27(1) ರಡಿಯಲ್ಲಿನ ಅವಕಾಶಗಳಿಗೆ ಮಾರ್ಪಾಟು ಮಾಡಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 103 ಸಿಎಲ್‌ಎಂ 2005, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2005**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಐ.ಟಿ.ಐ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ) ದೂರವಾಣಿನಗರ, ಬೆಂಗಳೂರು ಇದರ 2003-04ನೇ ಸಾಲಿನ ಮಹಾಸಭೆಯನ್ನು ನಡೆಸಲು ದಿನಾಂಕ: 30.09.2005ರ ವರೆಗೆ ಕಾಲಾವಕಾಶ ನೀಡಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪ ಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ,

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2005ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ, ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 642 ವಿಶೇಷ ಕರ್ತವ್ಯಾಧಿಕಾರಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ. ರಘುನಾಥ, ತಹಶೀಲ್ದಾರ್, ಕಾರವಾರ ತಾಲ್ಲೂಕು ಉತ್ತರ ಕನ್ನಡ ಜಿಲ್ಲೆ, ಇವರನ್ನು ಸೇವೆಯಿಂದ ಅಮಾನತ್ತು ಗೊಳಿಸುವ ಬಗ್ಗೆ.

**ಓದಲಾಗಿದೆ:** ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಬೆಂಗಳೂರು ಇವರ ದಿನಾಂಕ: 28.4.2005ರ ಪತ್ರ ಸಂಖ್ಯೆ: ಎಲ್‌ಓಕೆ/ಐಎನ್‌ವಿ(ಜಿ)/ಎಂ-5/ಕಾರವಾರ/ಸಿಆರ್-5/2005.

**ಪ್ರಸ್ತಾವನೆ:**

ಶ್ರೀ ಎಂ. ರಘುನಾಥ, ತಹಶೀಲ್ದಾರ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರು ಪಾಂಡುರಂಗ ನಾಯ್ಕ, ಅವರಸೆ, ಅಂಕೋಲ ತಾಲ್ಲೂಕು ಇವರಿಗೆ 5 ಮರಗಳ ಕಟಾವಿಗೆ ಸಂಬಂಧಿಸಿದಂತೆ, "ಕಟಾವು ಅನುಮತಿ ಪತ್ರ" (ಶ್ರೀಮತಿ ಗುಣವತಿ ಲಕ್ಷ್ಮಣ್ ವರ್ಣೇಕರ್, ಅವರಸೆ,

ರವರಿಂದ ಖರೀದಿಸಿದ 5 ಮರಗಳ ಕಟಾವಿಗೆ ಸಂಬಂಧಿಸಿದಂತೆ) ನೀಡಲು ಫಿರ್ಯಾದುದಾರರಿಂದ ಅಕ್ರಮವಾಗಿ 2000/- ರೂ.ಗಳನ್ನು ದಿನಾಂಕ: 15.4.2005 ರಂದು ಕೇಳಿ ಪಡೆಯುತ್ತಿದ್ದಾಗ ಲಂಚದ ಹಣದೊಡನೆ ಲೋಕಾಯುಕ್ತಕ್ಕೆ ಸಿಕ್ಕಿ ಬಿದ್ದಿರುವುದರಿಂದ ಅವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ತಿಳಿಸಿ, ಸದರಿ ಆರೋಪಿತರು ಸುಗಮ ತನಿಖೆಗೆ ಅಡ್ಡಿ ಉಂಟು ಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಹಾಗೂ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಕಾರವಾರ, ಇವರು ಆರೋಪಿತರಾದ ಶ್ರೀ ಎಂ. ರಘುನಾಥ, ತಹಶೀಲ್ದಾರ್, ಕಾರವಾರ, ಇವರನ್ನು ದಿನಾಂಕ: 15.4.2005 ರಂದು ದಸ್ತಗಿರಿ ಮಾಡಿ ಕಾರವಾರ ಜಿಲ್ಲೆ ವಿಶೇಷ ನ್ಯಾಯಾಲಯದ ಬಂಧನಕ್ಕೆ ನೀಡಿದ್ದು, ಆರೋಪಿತರನ್ನು ಘನ ನ್ಯಾಯಾಧೀಶರು ದಿನಾಂಕ: 15.4.2005 ರಿಂದ 16.04.2005 ರವರೆಗೆ ನ್ಯಾಯಾಂಗ ಬಂಧನಕ್ಕೆ ನೀಡಿದ್ದರಿಂದ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 10 ರನ್ವಯ ಆರೋಪಿತರನ್ನು ದಸ್ತಗಿರಿಯಾದ ದಿನಾಂಕದಿಂದಲೇ ಅಮಾನತ್ತಿನಲ್ಲಿಟ್ಟಿರುವಂತೆ ಪರಿಗಣಿಸಲು ಕೋರಿದ್ದಾರೆ ಹಾಗೂ ಅವರ ಲೀನ್ (ಸ್ಥಾನಪನ್ನ) ಅನ್ನು ಬೇರೆ ಕಡೆಗೆ ವರ್ಗಾಯಿಸುವಂತೆ ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ: 28.4.2005ರ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ಎಂ. ರಘುನಾಥ, ತಹಶೀಲ್ದಾರ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 27 ಎಡಿಇ 2005, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 10(2)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ರಘುನಾಥ, ತಹಶೀಲ್ದಾರ್, ಕಾರವಾರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ, ಇವರ ವಿರುದ್ಧದ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ದಿನಾಂಕ: 15.4.2005 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಅಧಿಕಾರಿಯ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್. 645 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3).

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಎಸ್.ಕೆ.ಎನ್. ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 1 (ಒಂದು) ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 299 ಎನ್‌ಸಿಇ 2004, ದಿನಾಂಕ: 13.9.2004.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಯಾತನೂರು/2005/746, ದಿನಾಂಕ: 13/16.04.2005.

**ಪ್ರಸ್ತಾವನೆ:**

ಮೆಸರ್ಸ್ ಎಸ್.ಕೆ.ಎನ್. ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಓದಲಾದ (1) ರಲ್ಲಿನ ಆದೇಶದಲ್ಲಿ ಬಿಜಾಪುರ ಜಿಲ್ಲೆಯ, ಸಿಂಧಗಿ ತಾಲ್ಲೂಕಿನ ಯಾತನೂರು ಗ್ರಾಮದ ಬಳಿ ಇಂಡಿ ಬ್ರಾಂಚ್ ಕೆನಾಲಿನ ಡಿಸ್ಟ್ರಿಬ್ಯೂಟರಿ-11ಕ್ಕೆ ಅಡ್ಡಲಾಗಿ (20.2. ಕಿ.ಮೀ.ನಿಂದ 21.5 ಕಿ.ಮೀ.) 500 ಕಿಲೊ ವ್ಯಾಟ್ ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಸದರಿ ಸ್ಥಳದಲ್ಲಿ ನೀರಿನ ಹರಿವು ಹಾಗೂ ನೀರಿನ ಹರಿವು 5 ಕ್ಯೂಮೆಕ್ಸ್‌ನಿಂದ 7.38 ಕ್ಯೂಮೆಕ್ಸ್ ಹಾಗೂ ನೀರಿನ ಎತ್ತರ 16 ಮೀಟರ್ ಇರುವುದರಿಂದ ಹಂಚಿಕೆ ಆಗಿರುವ ಸಾಮರ್ಥ್ಯವನ್ನು 500 ಕಿಲೊ ವ್ಯಾಟ್ (0.5 ಮೆಗಾ ವ್ಯಾಟ್) ನಿಂದ 1 (ಒಂದು) ಮೆಗಾ ವ್ಯಾಟ್‌ಗೆ ಹೆಚ್ಚಿಸಲು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಓದಲಾದ (2)ರ ಪತ್ರದಲ್ಲಿ ಸರ್ಕಾರದ ಅನುಮತಿ ಕೋರಿ ಸೂಕ್ತ ಶಿಫಾರಸ್ಸಿನೊಂದಿಗೆ ಸಲ್ಲಿಸಿರುತ್ತಾರೆ.

ಸದರಿ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 118 ಎನ್‌ಸಿಇ 2005, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2005**

ಮೆಸರ್ಸ್ ಎಸ್.ಕೆ.ಎನ್. ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ, ಜೇವರ್ಗಿ ತಾಲ್ಲೂಕಿನ ಯಾತನೂರು ಗ್ರಾಮದ ಬಳಿ ಇಂಡಿ ಬ್ರಾಂಚ್ ಕೆನಾಲಿನ ಡಿಸ್ಟ್ರಿಬ್ಯೂಟರಿ-11 ಕ್ಕೆ (ಮೊದಲು ಹಂಚಿಕೆಮಾಡಿದ ಸ್ಥಳವು ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನ ವ್ಯಾಪ್ತಿಗೆ ಬರುತ್ತದೆ) ಅಡ್ಡಲಾಗಿ (20.2 ಕಿ.ಮೀ.ನಿಂದ 21.5 ಕಿ.ಮೀ.) 500 ಕಿಲೊ ವ್ಯಾಟ್ ಸಾಮರ್ಥ್ಯದ ಯಾತನೂರು ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1(ಒಂದು) ಮೆಗಾವ್ಯಾಟ್ ಹೆಚ್ಚಿಸಿ ಅನುಷ್ಠಾನ ಮಾಡಲು ಜಲ ಸಂಪನ್ಮೂಲ ಇಲಾಖೆಯ ಅನುಮೋದನೆ ಪಡೆಯಬೇಕೆಂಬ ಷರತ್ತಿನೊಂದಿಗೆ ಅನುಮತಿ ನೀಡಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 646 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಗಳೂರು ಹಾಗೂ ಪ್ರಭಾರಿ ಕಾರ್ಯಪಾಲಕ ಇಂಜಿನಿಯರ್, ಡಿಪಿಎಂಯು, ದಕ್ಷಿಣ ಕನ್ನಡ, ಮಂಗಳೂರು ಇವರ ಮೇಲಿನ ಆಪಾದನೆಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ವರದಿಯ ನಂತರ ಆರೋಪಮುಕ್ತರನ್ನಾಗಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1) ಪ್ರಧಾನ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಇಐಸಿ:ಆರ್‌ಡಿಇಡಿ:ಎಸ್‌ಎಲ್‌ಡಬ್ಲ್ಯೂಬಿಸಿ:ಎ೯-4:2000-01:67, ದಿನಾಂಕ: 15.2.2001.
2) ಆದೇಶ ಸಂಖ್ಯೆ: ಗ್ರಾಅಪ:6:ಇಎನ್‌ಕ್ಯೂ:01, ದಿನಾಂಕ: 9.3.2001.
3) ಆದೇಶ ಸಂಖ್ಯೆ: ಗ್ರಾಅಪ:6:ಇಎನ್‌ಕ್ಯೂ:01, ದಿನಾಂಕ: 14.06.2001.
4) ಕಾರಣ ಕೇಳುವ ನೋಟೀಸಿನ ದಿನಾಂಕ: 24.4.2001.
5) ಆರೋಪಿತರ ಲಿಖಿತ ಹೇಳಿಕೆ ದಿನಾಂಕ: 27.4.2001.
6) ಸರ್ಕಾರಿ ಆದೇಶದ ಸಮ ಸಂಖ್ಯೆ: ದಿನಾಂಕ: 8.6.2001.
7) ವಿಚಾರಣಾಧಿಕಾರಿಯವರ ವರದಿ ದಿನಾಂಕ: 25.01.2005.

**ಪ್ರಸ್ತಾವನೆ:**

ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲೀಕರಣದ 1ನೇ ಹಂತದ ಯೋಜನೆಗಳ ಅನುಷ್ಠಾನಗೊಳಿಸುವ ಕಾಮಗಾರಿಯನ್ನು ಮೆ: ಸೂರ್ಯಪ್ರಕಾಶ್‌ರಾವ್ ಮತ್ತು ಕಂಪನಿ, ಹೈದ್ರಾಬಾದ್ ಇವರಿಗೆ ನೀಡಲಾಗಿದ್ದು, ಸದರಿ ಗುತ್ತಿಗೆದಾರರು ಗುತ್ತಿಗೆ ಕರಾರಿನಂತೆ ನಿಗದಿತ ಅವಧಿಯೊಳಗೆ ಕಾಮಗಾರಿಗಳನ್ನು ಪೂರ್ಣಗೊಳಿಸದಿದ್ದರಿಂದ, ಹಾಗೂ ಇನ್ನಿತರ ಗುತ್ತಿಗೆ ಕರಾರಿನ ನಿಬಂಧನೆಗಳನ್ನು ಪಾಲಿಸದಿದ್ದರಿಂದ, ಅವರ ಗುತ್ತಿಗೆ ಕರಾರನ್ನು ರದ್ದುಗೊಳಿಸುವ ಸಂಬಂಧ ಸದರಿ ಗುತ್ತಿಗೆದಾರರು ವಿವಿಧ ಜಿಲ್ಲೆಗಳಲ್ಲಿ ಮಾಡಿದ ಕಾಮಗಾರಿಗಳಿಗಾಗಿ ಅವರಿಗೆ ನೀಡಬೇಕಾಗಿದ್ದ ಹಾಗೂ ಅವರು ನಿರ್ವಹಿಸಿದ ಕಾಮಗಾರಿಗಳ ಮೊತ್ತ ಇನ್ನಿತರ ಸಂಪೂರ್ಣ ಮಾಹಿತಿ ಪಡೆದ ನಂತರ ಅವರ ಗುತ್ತಿಗೆ ಕರಾರನ್ನು ರದ್ದುಗೊಳಿಸುವ ಬಗ್ಗೆ ಪರಿಶೀಲಿಸಲು ಅನುವಾಗುವಂತೆ ಸದರಿ ಗುತ್ತಿಗೆದಾರರ ಅಂತಿಮ ಬಿಲ್ಲುಗಳನ್ನು ಪಾವತಿಸಬಾರದೆಂದು ಪ್ರಧಾನ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಸ್ಪಷ್ಟ ನಿರ್ದೇಶನ ನೀಡಿದ್ದರೂ ಸಹ, ಒಟ್ಟು ರೂ131.24 ಲಕ್ಷಗಳನ್ನು ಬಿಡುಗಡೆ ಮಾಡಿ ಸರ್ಕಾರದ ನಿರ್ದೇಶನಗಳನ್ನು ಉಲ್ಲಂಘಿಸಿ, ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಗಳೂರು ಹಾಗೂ ಪ್ರಭಾರಿ ಕಾರ್ಯಪಾಲಕ ಇಂಜಿನಿಯರ್, ಡಿಪಿಎಂಯು, ದಕ್ಷಿಣ ಕನ್ನಡ, ಮಂಗಳೂರು ಇವರು ತೀವ್ರತರ ಕರ್ತವ್ಯಲೋಪವೆಸಗಿರುವ ಅಂಶವನ್ನು ಅಂದಿನ ಪ್ರಧಾನ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡಿದ್ದರು.

ಸರ್ಕಾರವು ವರದಿಯನ್ನು ಪರಿಶೀಲಿಸಿ, ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್ ಇವರು ಮೇಲೆ ಹೇಳಲಾದಂತೆ ಕರ್ತವ್ಯಲೋಪವೆಸಗಿ ಸರ್ಕಾರದ ಬೊಕ್ಕಸಕ್ಕೆ ಹಾನಿ ಉಂಟುಮಾಡಿರುವನೆಂಬ ಅಂಶ ಮೇಲ್ನೋಟಕ್ಕೆ ಕಂಡುಬಂದಿದ್ದರಿಂದ ಇವರ ಮೇಲಿನ ಶಿಸ್ತು ಕ್ರಮವನ್ನು ಬಾಕಿ ಇಟ್ಟು, ಇವರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದ ಪ್ರಕಾರ ಸೇವೆಯಿಂದ ಅಮಾನತ್ತಿನಲ್ಲಿರಿಸಲಾಗಿತ್ತು. ತದನಂತರ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರ ಅಮಾನತ್ತನ್ನು ತೆರವುಗೊಳಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪ್ರಕಾರ ಆದೇಶ ಹೊರಡಿಸಿದೆ.

ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಗಳೂರು ಇವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಅನುಬಂಧ 1 ರಿಂದ 4 ರಲ್ಲಿ ಕಾರಣ ಕೇಳುವ ನೋಟೀಸಿನೊಂದಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪ್ರಕಾರ ಜಾರಿ ಮಾಡಲಾಗಿ, ಆರೋಪಿತರು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪ್ರಕಾರ ಲಿಖಿತ ಹೇಳಿಕೆ ಸಲ್ಲಿಸಿದ್ದರು.

ಸದರಿಯವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಇಲಾಖಾ ವಿಚಾರಣೆಗಾಗಿ ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಆದೇಶದಲ್ಲಿ ನೇಮಿಸಲಾಗಿತ್ತು.

ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳು ವಿವರವಾದ ವಿಚಾರಣೆ ನಡೆಸಿ, ಇವರ ಮೇಲಿನ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಪ್ರಕಾರ ಸರ್ಕಾರಕ್ಕೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 6 ಇಎನ್‌ಕ್ಯೂ 2001, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಗಳೂರು ಹಾಗೂ ಪ್ರಭಾರಿ ಕಾರ್ಯಪಾಲಕ ಇಂಜಿನಿಯರ್, ಡಿಪಿಎಂಯು, ದಕ್ಷಿಣ ಕನ್ನಡ, ಮಂಗಳೂರು ಇವರನ್ನು ಈ ಪ್ರಕರಣಕ್ಕೆ ಸಂಬಂಧಿಸಿದ ಆರೋಪಗಳಿಗೆ ಸಂಬಂಧಪಟ್ಟಂತೆ ದೋಷಮುಕ್ತರನ್ನಾಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 647

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಉಡುಪಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಉಪ ವಿಭಾಗದ ಅವ್ಯವಹಾರಗಳ ಬಗ್ಗೆ ಜಂಟಿ ಇಲಾಖಾ ವಿಚಾರಣೆ-ಮಂಡನಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 24 ಇಎನ್‌ಕ್ಯೂ 2004, ದಿನಾಂಕ: 22.09.2004.

**ಪ್ರಸ್ತಾವನೆ:**

ಉಡುಪಿ ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಇಂಜಿನಿಯರಿಂಗ್ ವಿಭಾಗದಲ್ಲಿ ಕರ್ನಾಟಕ ಸಾರ್ವಜನಿಕ ಟೆಂಡರ್ ಸಂಗ್ರಹಣೆಯಲ್ಲಿ ಪಾರದರ್ಶಕ ನಿಯಮಗಳನ್ನು ಉಲ್ಲಂಘಿಸಿರುವುದು ಹಾಗೂ ಇನ್ನಿತರ ಕರ್ತವ್ಯಲೋಪವೆಸಗಿದ್ದಾರೆನ್ನಲಾದ ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಮತ್ತು ಶ್ರೀ ಸಿ. ಮಂಜುನಾಥ ನಾಯರಿ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಪಂಇಂ ಉಪ ವಿಭಾಗ, ಉಡುಪಿ ಇವರುಗಳ ವಿರುದ್ಧ ಈ ಪ್ರಕರಣದಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಉಪ ಕಾರ್ಯದರ್ಶಿ (ಆಡಳಿತ) ಜಿಲ್ಲಾ ಪಂಚಾಯತ್, ಉಡುಪಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಆದೇಶ ಹೊರಡಿಸಲಾಗಿತ್ತು.

ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾದ ಉಡುಪಿ ಜಿಲ್ಲಾ ಪಂಚಾಯತ್‌ನ ಉಪ ಕಾರ್ಯದರ್ಶಿಯವರು ಪ್ರಕರಣದಲ್ಲಿ ವಿಳಂಬ ಮಾಡುತ್ತಿರುವುದರಿಂದ ಇವರನ್ನು ಬದಲಾಯಿಸಿ ಬೇರೆ ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ ಶಿಸ್ತು ಪ್ರಾಧಿಕಾರವು ಪರಿಶೀಲಿಸಿ

ಈ ಪ್ರಕರಣದಲ್ಲಿ ಮಂಡನಾಧಿಕಾರಿಯವರನ್ನು ಬದಲಾಯಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 24 ಇಎನ್‌ಕ್ಯೂ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಿ. ಅನಂತರಾಮು, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಪಂಇಂ ವಿಭಾಗ, ಉಡುಪಿ ಮತ್ತು ಶ್ರೀ ಮಂಜುನಾಥ್ ನಾಯರಿ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಹಾಗೂ ಪ್ರಭಾರ ಕಾರ್ಯಪಾಲಕ ಇಂಜಿನಿಯರ್ ಜಿಪಂಇಂ ಉಪ ವಿಭಾಗ, ಉಡುಪಿ ಇವರುಗಳ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ವಿಚಾರಣೆಯಲ್ಲಿ ವಿಚಾರಣಾಧಿಕಾರಿಗಳ ಮುಂದೆ ಪ್ರಕರಣ ಮಂಡಿಸಲು ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ-11(5)ರ ರೀತ್ಯಾ ಉಡುಪಿ ಜಿಲ್ಲಾ ಪಂಚಾಯತ್‌ನ ಉಪ ಕಾರ್ಯದರ್ಶಿ (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದ್ದ ದಿನಾಂಕ: 22.9.2004ರ ಆದೇಶವನ್ನು ಮಾರ್ಪಡಿಸಿ ಈ ಪ್ರಕರಣದಲ್ಲಿ ಪ್ರಾಜೆಕ್ಟ್ ಡೈರೆಕ್ಟರ್ (ಡಿಆರ್‌ಡಿಎ), ಜಿಲ್ಲಾ ಪಂಚಾಯತಿ ಮಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಯವರು ಪ್ರಕರಣದ ವಿಚಾರಣೆಗಾಗಿ ನಿಗದಿಪಡಿಸುವ ದಿನಾಂಕಗಳಂದು ಮಂಡನಾಧಿಕಾರಿಯವರು ಹಾಜರಾಗಿ ಮಂಡನಾಧಿಕಾರಿಯ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಸಿ. ಸುಂದರ**

ಪಿ.ಆರ್. 648 ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಎಸ್.ಸಿ. ಜಯಚಂದ್ರ ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಇವರ ಮೇಲಿನ ಆಪಾದನೆಗಳ ಬಗ್ಗೆ - ಇಲಾಖಾ ವಿಚಾರಣೆ ದೋಷಮುಕ್ತರನ್ನಾಗಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಜಿಲ್ಲಾ ಪಂಚಾಯತ್, ಮಂಡ್ಯ ಇವರ ಅ:ಸ ಪತ್ರ ಸಂಖ್ಯೆ: ಜಿಪಂಅ: ಉಕಾ-1:ಸಿ:69:2001-02, ದಿನಾಂಕ: 2.3.2002.
2. ಆದೇಶ ಸಂಖ್ಯೆ: ಗ್ರಾಅಪ 71 ಜಿಪಅ 2002, ದಿನಾಂಕ: 2.4.2002.
3. ಆದೇಶ ಸಂಖ್ಯೆ: ಗ್ರಾಅಪ 03 ಇಎನ್‌ಕ್ಯೂ 2002, ದಿನಾಂಕ: 30.9.2002.
4. ಆದೇಶ ಸಂಖ್ಯೆ: ಗ್ರಾಅಪ 03 ಇಎನ್‌ಕ್ಯೂ 2002, ದಿನಾಂಕ: 21.5.2002.
5. ಆಪಾದಿತ ಅಧಿಕಾರಿಯ ದಿನಾಂಕ: 13.6.2002ರ ಲಿಖಿತ ಹೇಳಿಕೆ.
6. ಆದೇಶ ಸಂಖ್ಯೆ: ಗ್ರಾಅಪ 03 ಇಎನ್‌ಕ್ಯೂ 2002, ದಿನಾಂಕ: 26.5.2003.
7. ವಿಚಾರಣಾಧಿಕಾರಿಯವರ ವರದಿಯ ದಿನಾಂಕ: 2.3.2005.

**ಪ್ರಸ್ತಾವನೆ:**

ಶ್ರೀ ಎಸ್.ಸಿ. ಜಯಚಂದ್ರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಇವರು ಆಡಳಿತ ಮಂಜೂರಾತಿ ಪಡೆಯದೇ ಕಾಮಗಾರಿಗಳಿಗೆ ಅನುಮೋದನೆ ನೀಡಿರುವುದು, ಅನುದಾನಕ್ಕಿಂತ ಹೆಚ್ಚುವರಿ ಖರ್ಚು ಮಾಡಿರುವುದು, ಖರೀದಿ ನಿಯಮಗಳನ್ನು ಪಾಲಿಸದೇ ಇರುವುದು, ಲೆಕ್ಕಶೀರ್ಷಿಕೆಗಳಲ್ಲಿ ಒದಗಿಸಿರುವ ಅನುದಾನವನ್ನು ಉದ್ದೇಶಿತ ಕಾರ್ಯಕ್ರಮಗಳ ಬದಲಿಗೆ ಬೇರೆ ಕಾರ್ಯಕ್ರಮಗಳಿಗೆ ಖರ್ಚು ಮಾಡಿರುವುದು ಮತ್ತು ಇನ್ನಿತರ ಅಕ್ರಮಗಳನ್ನು ಮಾಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟವನ್ನು ಉಂಟು ಮಾಡಿರುವುದು ಹಾಗೂ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿಸಿರುವುದರಿಂದ ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವಂತೆ ಮಂಡ್ಯ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ವರದಿ ಸಲ್ಲಿಸಿದ್ದರಿಂದ ಸರ್ಕಾರವು ಸದರಿ ವರದಿಯನ್ನು ಪರಿಶೀಲಿಸಿ, ಶ್ರೀ ಎಸ್.ಸಿ. ಜಯಚಂದ್ರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಇವರ ಮೇಲೆ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಆದೇಶದಲ್ಲಿ ಇವರನ್ನು ಅಮಾನತ್ತಿನಲ್ಲಿರಿಸಿತ್ತು. ತದನಂತರ, ಸರ್ಕಾರವು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಅಮಾನತ್ತನ್ನು ರದ್ದುಗೊಳಿಸಿ ಇವರ ಸೇವೆಯನ್ನು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂತಿರುಗಿಸಿತ್ತು. ಹಾಗೂ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಅನುಬಂಧ-1 ರಿಂದ 4 ರಂತೆ ಆರೋಪ ಪಟ್ಟಿ ಜಾರಿಗೊಳಿಸುವ ಮೂಲಕ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)

1957ರ ನಿಯಮ-11 ರಂತೆ ಸದರಿ ಅಧಿಕಾರಿಯ ಮೇಲೆ ಇಲಾಖಾ ವಿಚಾರಣೆ ಹೂಡಲಾಗಿತ್ತು. ತಮ್ಮ ಮೇಲಿನ ಆಪಾದನೆಗಳಿಗೆ ಆಪಾದಿತ ಅಧಿಕಾರಿಯು ಲಿಖಿತ ಹೇಳಿಕೆ ನೀಡಿ, ಈ ಎಲ್ಲಾ ಆಪಾದನೆಗಳು ಸತ್ಯಕ್ಕೆ ದೂರವಾಗಿರುವುದರಿಂದ ಅವುಗಳನ್ನು ಕೈಬಿಡಲು ಹಾಗೂ ವಿಚಾರಣೆ ನಡೆಸಿದರೂ ಸಹ ವಿಚಾರಣೆಗೆ ಹಾಜರಾಗಲು ಸಿದ್ದರಿರುವುದಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಪ್ರಕಾರ ಉತ್ತರ ನೀಡಿದ್ದರು. ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ವಿವರವಾದ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (6)ರ ಆದೇಶದಲ್ಲಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿತ್ತು. ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ, ಶ್ರೀ ಎಸ್.ಸಿ. ಜಯಚಂದ್ರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಇವರ ಮೇಲಿನ ಎಲ್ಲಾ ಆರೋಪಗಳು ರುಜುವಾತಾಗಿರುವುದಿಲ್ಲವೆಂದು ವರದಿ ಸಲ್ಲಿಸಿದ್ದರು. ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಪರಿಶೀಲಿಸಿ ಅದನ್ನು ಒಪ್ಪಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 03 ಇಎನ್‌ಕ್ಯೂ 2002, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎಸ್.ಸಿ. ಜಯಚಂದ್ರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಇವರ ಮೇಲಿನ ಆಪಾದನೆಗಳು ವಿವರವಾದ ವಿಚಾರಣೆಯಲ್ಲಿ ರುಜುವಾತಾಗದಿರುವುದರಿಂದ ಸರ್ಕಾರವು ಅವರ ಮೇಲಿನ ಆಪಾದನೆಗಳು ಕೈಬಿಟ್ಟು, ಅವರನ್ನು ದೋಷಮುಕ್ತಗೊಳಿಸಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗುರುಮೂರ್ತಿ ಎಸ್. ಹೆಗಡೆ**

ಪಿ.ಆರ್. 649

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಆದಿ ಕರ್ನಾಟಕ ವಿದ್ಯಾಭಿವೃದ್ಧಿ ಸಂಘ(ರಿ) ದಾವಣಗೆರೆ ಈ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾ ನೋಂದಣಾಧಿಕಾರಿಗಳು ದಾವಣಗೆರೆ ಇವರ ಪತ್ರ ಸಂಖ್ಯೆ:ಜಿನೋದಾ:ಸಂಘ-30/74-75 ದಿನಾಂಕ: 19/21-07-2004.
2. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ:ಕಂಇ 38 ಮುನೋಸೊ2004, ದಿನಾಂಕ:02-08-2004.
3. ರಿ.ಪಿ.ಸಂಖ್ಯೆ:29433/04ರ ಆದೇಶದ ದಿನಾಂಕ: 14-9-2004.
4. ಜಿಲ್ಲಾ ನೋಂದಣಾಧಿಕಾರಿಗಳು ದಾವಣಗೆರೆ ಇವರ ಪತ್ರ ಸಂಖ್ಯೆ:ಜಿನೋದಾ:ಸಂಘ-30/74-75, ದಿನಾಂಕ: 15-12-2004.
5. ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ:ಕಂಇ 38 ಮುನೊಸೊ 2004, ದಿನಾಂಕ:18-1-2005.
6. ಕಾರ್ಯದರ್ಶಿಗಳು, ಆದಿ ಕರ್ನಾಟಕ ವಿದ್ಯಾಭಿವೃದ್ಧಿ ಸಂಘ(ರಿ)ದಾವಣಗೆರೆ, ಇವರ ಉತ್ತರದ ದಿನಾಂಕ: 5-2-2005.
7. ರಿ.ಪಿ.ಸಂಖ್ಯೆ:5697/2005ರ ಆದೇಶ ದಿನಾಂಕ: 11-02-2005 & 30-03-2005.

**ಪ್ರಸ್ತಾವನೆ:**

ಮೇಲೆ 1 ರಲ್ಲಿ ಓದಲಾದ ದಿನಾಂಕ:19/21-07-2004ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು, ಆದಿ ಕರ್ನಾಟಕ ವಿದ್ಯಾಭಿವೃದ್ಧಿ ಸಂಘ(ರಿ), ಪಿ.ಜೆ. ಬಡಾವಣೆ, ದಾವಣಗೆರೆ ಈ ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಪ್ರಕಾರ ದಿನಾಂಕ:6-7-1974ರಂದು ನೋಂದಾಯಿಸಲ್ಪಟ್ಟಿದ್ದು, ನೋಂದಣಿಯ ಕ್ರಮಾಂಕವು 30/74-75 ಆಗಿ ರುತ್ತದೆ. ಜಿಲ್ಲಾ ನೋಂದಣಾಧಿಕಾರಿಯವರು ಸದರಿ ಸಂಘದ ಅವ್ಯವಹಾರಗಳ ಬಗ್ಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರ ಅಡಿಯಲ್ಲಿ ವಿಚಾರಣೆ ನಡೆಸಿದ್ದು, ಈ ಸಂಸ್ಥೆಯು ಪ್ರಾರಂಭವಾದಾಗಿನಿಂದಲೂ ಸಹ ಸದರಿ ಸಂಘದಲ್ಲಿ ನಿಯಮಾನುಸಾರವಾಗಿ ಆಡಳಿತವನ್ನು ನಡೆಸಿಕೊಂಡು ಬಂದಿರುವುದಿಲ್ಲ. 7 ವರ್ಷಗಳಿಂದಲೂ ನೋಂದಣಿ ಕಲಂ 11ರ ಪ್ರಕಾರ ಪ್ರತಿ ವರ್ಷ ಸಾಮಾನ್ಯ ಸರ್ವ ಸದಸ್ಯರ ಸಭೆ ನಡೆಸಿ ಆಡಿಟ್‌ರವರಿಂದ ಪರಿಶೋಧಿಸಲ್ಪಟ್ಟ ಲೆಕ್ಕಪತ್ರ ಗಳಿಗೆ ಅನುಮೋದನೆ ಪಡೆದು ಜಿಲ್ಲಾ ನೋಂದಣಾಧಿಕಾರಿಯವರಿಗೆ ಸಲ್ಲಿಸಿರುವುದಿಲ್ಲ. ಸಂಘದ ಬೈಲಾ ಪ್ರಕಾರ ಪ್ರತಿ 2 ವರ್ಷಕ್ಕೊಮ್ಮೆ ಕಾರ್ಯಕಾರಿ ಮಂಡಳಿಯ ಆಯ್ಕೆ ಪ್ರಕ್ರಿಯೆಯನ್ನು ನಿಯಮಿತವಾಗಿ ನಡೆಸಿರುವುದಿಲ್ಲ ಮತ್ತು ನೋಂದಣಿ ಕಾಯ್ದೆಯ ಕಲಂ 13ರ ಪ್ರಕಾರ ಕಾರ್ಯಕಾರಿ ಸಮಿತಿ ಪಟ್ಟಿ, ಸಂಘದ ಪರಿಶೋಧಿತ ಲೆಕ್ಕಪತ್ರಗಳು ಹಾಗೂ ಆಸ್ತಿ ಹೊಣೆ ಪಟ್ಟಿಯನ್ನು ಜಿಲ್ಲಾ ನೋಂದಣಾಧಿಕಾರಿಯವರಿಗೆ ಸಲ್ಲಿಸಿರುವುದಿಲ್ಲ. ಪ್ರಮುಖವಾಗಿ 13 ಸದಸ್ಯರಿರುವ ಈ ಸಂಘದಲ್ಲಿ 5 ಸದಸ್ಯರು ಮರಣಹೊಂದಿದ್ದು, 4 ಸದಸ್ಯರು ರಾಜೀನಾಮೆ ನೀಡಿರುತ್ತಾರೆ. ಉಳಿದ 4 ಸದಸ್ಯರ ಪೈಕಿ ಮೂರು ಸದಸ್ಯರು ದಾವಣಗೆರೆ ಜಿಲ್ಲೆಯಲ್ಲಿ ವಾಸವಿಲ್ಲದೆ, ಕಾರ್ಯದರ್ಶಿ ಮಾತ್ರ ಇದ್ದು, ಈ 3 ಸದಸ್ಯರ ಅಸ್ತಿತ್ವ ಸಹ ಸಂಶಯಾಸ್ಪದವಾಗಿದೆ. ನೋಂದಣಿ ಕಾಯ್ದೆ 1960ರ ಕಲಂ 4-5ರ ಪ್ರಕಾರ ಒಂದು ಸಂಘದ ಅಸ್ತಿತ್ವಕ್ಕೆ ಕನಿಷ್ಠ-7 ಸದಸ್ಯರ ಅವಶ್ಯಕತೆ ಇರುತ್ತದೆ. ಆದರೆ ಈ ಸಂಘದಲ್ಲಿ ಕಾರ್ಯದರ್ಶಿಯವರು ಒಬ್ಬರು ಮಾತ್ರ ಇದ್ದು, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 11,12 & 13ರ ಉಲ್ಲಂಘನೆಯಾಗಿದೆ ಎಂದು ತಿಳಿಸುತ್ತಾ ನೋಂದಣಿ ಕಾಯ್ದೆ 1960ರ ಕಲಂ 27-A ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

2. ಜಿಲ್ಲಾ ನೋಂದಣಾಧಿಕಾರಿಯವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಜಿಲ್ಲಾ ನೋಂದಣಾಧಿಕಾರಿಗಳು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳು ವಾಸ್ತವಾಂಶಗಳಿಂದ ಕೂಡಿರುವುದು ಕಂಡು ಬಂದ ಕಾರಣ, ಆಡಳಿತಾಧಿಕಾರಿ ನೇಮಕಾತಿ ಪೂರ್ವದಲ್ಲಿ ಸಂಘದ ಪದಾಧಿಕಾರಿಗಳಾದ ಕಾರ್ಯದರ್ಶಿಗಳಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ

ಪತ್ರದಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಜಾರಿ ಮಾಡಲು ಜಿಲ್ಲಾ ನೋಂದಣಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರಿಗೆ ಸೂಚಿಸ ಲಾಗಿತ್ತು.

3. ಜಿಲ್ಲಾ ನೋಂದಣಾಧಿಕಾರಿಗಳು ಅವರ ಪತ್ರ ದಿನಾಂಕ: 5-8-2004 ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ನೋಂದಣಿ ಕಾಯ್ದೆ ಕಲಂ 25ರ ಪ್ರಕಾರ ನಡೆಸಿದ ಸ್ವಮೋಟೋ ವಿಚಾರಣೆಯ ನಡವಳಿಗಳ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿ.ಪಿ. ಸಂಖ್ಯೆ:29433/04ನ್ನು ದಾಖಲಿಸಿ ತಡೆ ಆಜ್ಞೆ ತಂದಿರುವುದರಿಂದ ಕಾರಣ ಕೇಳುವ ಸೂಚನಾ ಪತ್ರವನ್ನು ಈ ಕಾರ್ಯಾಲಯದಿಂದ ಜಾರಿ ಮಾಡಿದಲ್ಲಿ ನ್ಯಾಯಾಲಯದ ನಿಂದನೆ ಆಗಬಹುದಾದ್ದರಿಂದ ಸದರಿ ಸೂಚನಾ ಪತ್ರವನ್ನು ಸರ್ಕಾರದ ಹಂತದಲ್ಲಿಯೇ ಜಾರಿ ಮಾಡಬಹುದೆಂದು ತಿಳಿಸಿ ಹಿಂದಿರುಗಿಸಿರುತ್ತಾರೆ.

4. ಮೇಲೆ ಓದಲಾದ (3)ರಲ್ಲಿ ರಿ.ಪಿ.ಸಂಖ್ಯೆ:29433/04ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ: 14-9-2004ರಂದು ನೀಡಿರುವ ಆದೇಶದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ಸರ್ಕಾರಕ್ಕೆ ದಿನಾಂಕ:19/21-07-2004ರಂದು ಸಲ್ಲಿಸಿದ್ದ ವಿಚಾರಣಾ ವರದಿಯನ್ನು ರದ್ದುಗೊಳಿಸಿದೆ. ಮುಂದುವರಿದು ಸಂಘದ ಕಾರ್ಯದರ್ಶಿಯವರಿಗೆ ಸೂಕ್ತ ಅವಕಾಶ ನೀಡಿ ಮರು ವಿಚಾರಣೆ ಮಾಡಿ ನಿಯಮಾನುಸಾರ ಕ್ರಮ ತೆಗೆದುಕೊಳ್ಳುವಂತೆ ಜಿಲ್ಲಾ ನೋಂದಣಾಧಿಕಾರಿಗಳು ದಾವಣಗೆರೆ ಇವರಿಗೆ ನಿರ್ದೇಶಿಸಿದೆ. ಸದರಿ ಆದೇಶದನ್ವಯ ಜಿಲ್ಲಾ ನೋಂದಣಾಧಿಕಾರಿಗಳು ಸಂಘಗಳ ನೋಂದಣಿ ಕಾಯ್ದೆಯ ಕಲಂ 25ರಡಿ ಪುನ: ವಿಚಾರಣೆ ನಡೆಸಿದ್ದು, ದಿನಾಂಕ:25-2-1998ರಿಂದ ಒಬ್ಬರ ನಂತರ ಒಬ್ಬರು ಸಂಘದಿಂದ ನಿರ್ಗಮಿಸಿದ್ದರೂ ಸಹ ಸಂಘವು ಈವರೆಗೆ ಯಾವುದೇ ಕ್ರಮವನ್ನು ಜರುಗಿಸಿರುವುದಿಲ್ಲ. ಆದ್ದರಿಂದ ಸಂಘಗಳ ನೋಂದಣಿ ಕಾಯ್ದೆ ಕಲಂ 11 & 13 ರ ಸ್ಪಷ್ಟ ಉಲ್ಲಂಘನೆಯಾಗಿರುತ್ತದೆ. ಈ ಸಂಘವು 1934ರಿಂದ ಅಸ್ತಿತ್ವಕ್ಕೆ ಬಂದಿದ್ದು, ಅಂದಿನಿಂದಲೂ ಚರ ಮತ್ತು ಸ್ಥಿರಾಸ್ತಿಗಳು ಈ ಸಂಘಕ್ಕೆ ಬರುತ್ತಲೇ ಇವೆ. ಹಾಗೂ ಆದಿ ಕರ್ನಾಟಕ ಸಮಾಜದ ವಿದ್ಯಾರ್ಥಿಗಳು ಈ ಸಂಘದ ಆಶ್ರಯದಲ್ಲಿ ವಿದ್ಯಾರ್ಜನೆ ಮಾಡುತ್ತಿರುತ್ತಾರೆ. ದಾವಣಗೆರೆ ನಗರದ ಅತ್ಯಂತ ಮಹತ್ವದ ಸ್ಥಳವಾದ ಪಿ.ಜಿ. ಬಡಾವಣೆಯಲ್ಲಿ ಕೋಟ್ಯಾನುಗಟ್ಟಲೆ ಬೆಲೆ ಬಾಳುವ ನಿವೇಶನ ಹಾಗೂ ಕಟ್ಟಡಗಳು ಇರುತ್ತವೆ. ಇವುಗಳ ಉಸ್ತುವಾರಿ ನೋಡಿಕೊಂಡು, ಸದರಿ ಸಮಾಜದ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಗೆ ಅನುಕೂಲವಾಗುವಂತೆ ಅತೀ ಶೀಘ್ರದಲ್ಲಿ ಪ್ರಸಾದ ನಿಲಯ(ಬೋರ್ಡಿಂಗ್) ಪ್ರಾರಂಭಿಸಿ ಹಾಸ್ಟಲ್‌ಗಳಲ್ಲಿ ವಸತಿ ಮಾಡಲು ಅನುವು ಮಾಡಿಕೊಡುವುದು ಸಾರ್ವಜನಿಕ ಹಿತದೃಷ್ಟಿಯಿಂದ ಅವಶ್ಯಕವಾಗಿರುತ್ತದೆ. ಆದ್ದರಿಂದ ಈ ಮೇಲ್ಕಂಡ ಸಂಘಕ್ಕೆ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-A ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡುವಂತೆ ಮೇಲೆ ಓದಲಾದ (4)ರಲ್ಲಿ ದಿನಾಂಕ:15-12-2004ರ ಅವರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

5. ಜಿಲ್ಲಾ ನೋಂದಣಾಧಿಕಾರಿ, ದಾವಣಗೆರೆ ಇವರ ದಿನಾಂಕ: 15-12-2004ರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೇಲೆ ಓದಲಾದ (5)ರಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ಸಂಘದ ಕಾರ್ಯದರ್ಶಿಯವರಿಗೆ ಜಾರಿ ಮಾಡಲಾಗಿದೆ. ಮೇಲೆ ಓದಲಾದ (6)ರಲ್ಲಿ ದಿನಾಂಕ: 5-2-2005ರಂದು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಆದರೆ ಈ ಮಧ್ಯೆ ಜಿಲ್ಲಾ ನೋಂದಣಾಧಿಕಾರಿಯವರ ವರದಿ ಹಾಗೂ ತತ್ಸಂಬಂಧ ಜಾರಿ ಮಾಡಲಾದ ಕಾರಣ ಕೇಳುವ ಸೂಚನಾ ಪತ್ರದ ವಿರುದ್ಧ ಮೇಲೆ (7) ರಲ್ಲಿ ಓದಲಾದಂತೆ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿ.ಪಿ.ಸಂಖ್ಯೆ:5697/05ನ್ನು ದಾಖಲು ಮಾಡಿರುತ್ತಾರೆ. ಈ ರಿಟ್ ಅರ್ಜಿಗೆ ಸಂಬಂಧಿಸಿದಂತೆ ನ್ಯಾಯಾಲಯವು ದಿನಾಂಕ:11-2-2005ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಮೇಲೆ (4) & (5) ರಲ್ಲಿ ಓದಲಾದ ಜಿಲ್ಲಾ ನೋಂದಣಾಧಿಕಾರಿಯವರ ವಿಚಾರಣಾ ವರದಿ ಮತ್ತು ತತ್ಸಂಬಂಧ ಸಂಘದ ಕಾರ್ಯದರ್ಶಿ ಯವರಿಗೆ ಜಾರಿ ಮಾಡಲಾದ ಕಾರಣ ಕೇಳುವ ಸೂಚನಾ ಪತ್ರಕ್ಕೆ ತಡೆ ಆಜ್ಞೆ ನೀಡಿರುತ್ತದೆ. ನಂತರ ದಿನಾಂಕ:30-3-2005ರ ಆದೇಶದಲ್ಲಿ ತಡೆ ಆಜ್ಞೆಯನ್ನು ತೆರವು ಗೊಳಿಸಿ ಅರ್ಜಿಯನ್ನು ತಿರಸ್ಕರಿಸಿದೆ (Rejected) ಮತ್ತು ಕಾರಣ ಕೇಳುವ ಸೂಚನಾ ಪತ್ರಕ್ಕೆ 15 ದಿನದೊಳಗಾಗಿ ಆಕ್ಷೇಪಣಾ ಹೇಳಿಕೆಯನ್ನು ನೀಡುವಂತೆ ಸೂಚಿಸಿರುತ್ತದೆ.

6. ಸಂಘದ ಕಾರ್ಯದರ್ಶಿಯವರು ಮೇಲೆ ಓದಲಾದ (6)ರಲ್ಲಿ ದಿನಾಂಕ: 5-2-2002ರಲ್ಲಿ ಸಲ್ಲಿಸಿರುವ ಆಕ್ಷೇಪಣಾ ಹೇಳಿಕೆಯನ್ನು ಬಿಟ್ಟು ಬೇರೆ ಯಾವುದೇ ತರಹದ ಹೇಳಿಕೆಯನ್ನು ಕೊಟ್ಟಿರುವುದಿಲ್ಲ. ಸಂಘದ ಕಾರ್ಯದರ್ಶಿಯವರ ಹೇಳಿಕೆಯ ಪ್ರಕಾರ ಈ ಕೆಳಕಂಡ ಅಂಶಗಳನ್ನು ವಾದಿಸಿದ್ದಾರೆ.

1. ಸಂಘವು ಸರ್ವ ಸದಸ್ಯರ ಸಭೆಯನ್ನು ಕಾಯ್ದೆಯನುಸಾರ ಲೆಕ್ಕಪತ್ರಗಳನ್ನು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಿರುವುದಾಗಿ ತಿಳಿಸಿದ್ದಾರೆ.
2. ಜಿಲ್ಲಾ ನೋಂದಣಾಧಿಕಾರಿಗಳು ಸ್ವಮೋಟೋ ವಿಚಾರಣೆ ಕೈಗೊಂಡು, ಸಂಘದ ಕಾರ್ಯದರ್ಶಿಯವರು ದಿನಾಂಕ: 22-06-2004 ರಂದು ಸಂಬಂಧಿಸಿದ ದಾಖಲೆ ಪತ್ರಗಳೊಂದಿಗೆ ಜಿಲ್ಲಾ ನೋಂದಣಾಧಿಕಾರಿಯವರ ಮುಂದೆ ವಿಚಾರಣೆಗೆ ಹಾಜರಾಗುವಂತೆ ದಿನಾಂಕ:1-6-2004ರಂದು ನೋಟೀಸನ್ನು ಕೊಟ್ಟಿರುವುದಾಗಿ ತಿಳಿಸಿರುತ್ತಾರೆ. ಮುಂದುವರಿದು ಸೂಕ್ತ ಕಾಲಾವಕಾಶವನ್ನು ನೀಡದೆ ಏಕಪಕ್ಷೀಯವಾಗಿ ನಿರ್ಧಾರ ಕೈಗೊಳ್ಳಲು ಉದ್ದೇಶಿಸಿದ್ದರಿಂದ ನ್ಯಾಯಾಲಯದಲ್ಲಿ ಮೊಕದ್ದಮೆ ಸಂಖ್ಯೆ:29433/2003ನ್ನು ದಾಖಲು ಮಾಡಿದ್ದಾಗಿ ತಿಳಿಸಿದ್ದಾರೆ.
3. ಜಿಲ್ಲಾ ನೋಂದಣಾಧಿಕಾರಿಗಳು ಸಂಸ್ಥೆಗೆ ಸಂಬಂಧವಿಲ್ಲದ ವ್ಯಕ್ತಿಗಳಿಗೆ ವಿಚಾರಣೆಗೆ ಹಾಜರಾಗಲು ಅನುಮತಿಸಿರುತ್ತಾರೆ ಎಂದು ಆಕ್ಷೇಪಿಸಿರುತ್ತಾರೆ.
4. ಜಿಲ್ಲಾಧಿಕಾರಿಗಳು ದಾವಣಗೆರೆ ರವರು ಸಂಘದ ವ್ಯವಹಾರಗಳಲ್ಲಿ ಮಧ್ಯೆ ಪ್ರವೇಶಿಸಿ ಸಂಘದ ಲೆಕ್ಕಪತ್ರಗಳ ಪುಸ್ತಕಗಳನ್ನು ವಶಪಡಿಸಿಕೊಂಡಿರುವುದನ್ನು ಪ್ರಶ್ನಿಸಿರುತ್ತಾರೆ.
5. ಜಿಲ್ಲಾ ನೋಂದಣಾಧಿಕಾರಿಗಳ ಮುಂದೆ ದಿನಾಂಕ: 27-10-2004ರಂದು ವಿಚಾರಣೆಗೆ ಹಾಜರಾಗಿ 43 ದೃಢೀಕೃತ ದಾಖಲೆಗಳನ್ನು ಹಾಜರುಪಡಿಸಿರುವುದಾಗಿ ತಿಳಿಸಿರುತ್ತಾರೆ.
6. ಜಿಲ್ಲಾ ನೋಂದಣಾಧಿಕಾರಿಗಳ ವರ್ತನೆಯಿಂದ ಬೇಸತ್ತು ವಿಚಾರಣೆಯನ್ನು ಸ್ಥಗಿತಗೊಳಿಸಿ ಬೇರೆ ಯಾವುದಾದರೂ ಜಿಲ್ಲೆಗೆ ವರ್ಗಾಯಿಸಿ ವಿಚಾರಣೆ ನಡೆಸುವಂತೆ ಕೋರಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು

ಬೆಂಗಳೂರು ಹಾಗೂ ಕಾರ್ಯದರ್ಶಿಗಳು ಕಂದಾಯ ಇಲಾಖೆ ಇವರಿಗೆ ಮನವಿ ಸಲ್ಲಿಸಿದ್ದಾಗ್ಯೂ ಏನೂ ಕ್ರಮ ತೆಗೆದುಕೊಂಡಿರುವುದಿಲ್ಲ ವೆಂದು ವಾದಿಸಿರುತ್ತಾರೆ.

7. ಸಂಘದ ಕಾರ್ಯದರ್ಶಿಯವರ ಪರ ವಕೀಲರು ದಿನಾಂಕ: 25-11-2004 ರಂದು ಜಿಲ್ಲಾ ನೋಂದಣಾಧಿಕಾರಿಗಳ ಮುಂದೆ ಹಾಜರಾಗಿ ಕಾರ್ಯದರ್ಶಿಯವರಿಗೆ ಆರೋಗ್ಯ ಸರಿಯಿಲ್ಲದ ಕಾರಣ ವಿಚಾರಣೆ ದಿನಾಂಕವನ್ನು ಮುಂದೂಡುವಂತೆ ಕೋರಿದ್ದರ ಹಿನ್ನಲೆಯಲ್ಲಿ ದಿನಾಂಕ:9-12-2004ಕ್ಕೆ ವಿಚಾರಣೆಯನ್ನು ನಿಗದಿಪಡಿಸಲಾಗಿತ್ತು.ಆದರೆ ಕಾರ್ಯದರ್ಶಿಯವರ ಪರ ವಕೀಲರಿಗೆ ಪೂರ್ವ ನಿಯೋಜಿತ ಬೇರೆ ಪ್ರಕರಣವಿದ್ದುದರಿಂದ ಅಂದು ವಿಚಾರಣೆಗೆ ಹಾಜರಾಗದೆ ತಂತಿ ಸಂದೇಶದ ಮೂಲಕ ವಿಚಾರಣೆಯನ್ನು ಮುಂದೂಡಲು ಕೋರಿದ್ದರೂ ಸಹ ಜಿಲ್ಲಾ ನೋಂದಣಾಧಿಕಾರಿಗಳು ಅದೇ ದಿನಾಂಕದಂದು ವಿಚಾರಣೆ ನಡೆಸಿ ಕಾರ್ಯದರ್ಶಿ ಹಾಗೂ ಕಾರ್ಯದರ್ಶಿಗಳ ಪರ ವಕೀಲರು ಗೈರುಹಾಜರಾಗಿರುವುದಾಗಿ ವಿಚಾರಣಾ ವರದಿಯಲ್ಲಿ ನಮೂದಿಸಿ ವರದಿಯನ್ನು ದಿನಾಂಕ:15-12-2004ರಂದು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

8. ಈ ಪ್ರಕರಣದ ವಿಚಾರಣೆಯಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು ಪಕ್ಷಪಾತ ತೋರಿರುವುದಾಗಿ ಮತ್ತು ವಿಚಾರಣಾ ವರದಿಯು ಕರ್ನಾಟಕ ಸಂಘಗಳ ನೋಂದಣಿ ನಿಯಮಾವಳಿಗಳು 1961ರ ನಿಯಮ 8 ರ ವಿರುದ್ಧ ಇರುವುದಾಗಿ ಆಕ್ಷೇಪಿಸಿರುತ್ತಾರೆ.

9. 1997ರಲ್ಲಿ ನಡೆದ ಸರ್ವ ಸದಸ್ಯರ ಸಭೆಯಲ್ಲಿ ಸಂಘದ ಬೈಲಾಗಳಿಗೆ ತಿದ್ದುಪಡಿ ತಂದು ಕಾರ್ಯಕಾರಿ ಸಮಿತಿಯ ಅವಧಿಯನ್ನು 3 ವರ್ಷಗಳಿಗೆ ನಿಗದಿಪಡಿಸಲಾಗಿದ್ದ ಕಾರಣ ನಿಧನ ಹೊಂದಿದ ಸದಸ್ಯರ ಹೆಸರುಗಳೂ ಸಹ ಕಾರ್ಯಕಾರಿ ಸಮಿತಿಯ ಪಟ್ಟಿಯಲ್ಲಿ ಉಳಿದಿರುತ್ತದೆ. ಇದೇ ಅಂಶವನ್ನು ಮುಖ್ಯವಾಗಿರಿಸಿಕೊಂಡು ಜಿಲ್ಲಾ ನೋಂದಣಾಧಿಕಾರಿಗಳು ವರದಿಯಲ್ಲಿ ಉಲ್ಲೇಖಿಸಿರುವುದು ನ್ಯಾಯಸಮ್ಮತವಲ್ಲವೆಂದು ಆಕ್ಷೇಪಿಸಿರುತ್ತಾರೆ.

7. ಈ ಮೇಲಿನ ಅಂಶಗಳನ್ನು ಕೂಲಂಕಷವಾಗಿ ಪರೀಕ್ಷಿಸಲಾಗಿದ್ದು, ಕ್ರಮಾನುಸಾರ ಅಂಶವಾರು ವಿವರಗಳು ಈ ಕೆಳಕಂಡಂತಿರುತ್ತವೆ.

1. ಸಂಘವು 1999-2000 ಸಾಲಿನವರೆಗೆ ಮಾತ್ರ ಲೆಕ್ಕಪತ್ರಗಳನ್ನು ಕಾರ್ಯಕಾರಿ ಸಮಿತಿ ಸದಸ್ಯರ ಪಟ್ಟಿಯನ್ನು ಸಲ್ಲಿಸಿದ್ದು ನಂತರದ ಅವಧಿಗೆ ಸಲ್ಲಿಸಿರುವುದಿಲ್ಲ.
2. ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರ ಅಡಿಯಲ್ಲಿ ಸ್ವಮೋಟೋ ತನಿಖೆ ನಡೆಸಲು ಜಿಲ್ಲಾ ನೋಂದಣಾಧಿಕಾರಿಗಳಿಗೆ ಅಧಿಕಾರವಿರುತ್ತದೆ. ಅಲ್ಲದೆ ದಿನಾಂಕ:22-6-2004ರಂದು ವಿಚಾರಣೆಗೆ ಹಾಜರಾಗಬೇಕೆಂಬ ನೋಟೀಸನ್ನು ದಿನಾಂಕ:1-6-2004ರಂದು ಹೊರಡಿಸಿರುವುದರಿಂದ 15 ದಿನಗಳ ಕಾಲಾವಕಾಶವನ್ನು ನೀಡಿರುವುದು ವ್ಯಕ್ತವಾಗುತ್ತದೆ.
3. ಶ್ರೀ ಕಬ್ಬೂರು ದುರ್ಗಪ್ಪ, ಶ್ರೀ ಎ.ಕೆ. ನಾಗಪ್ಪ ಮತ್ತು ಶ್ರೀ ಆವಲಪ್ಪ ಇವರುಗಳು ಸಂಘದ ಸದಸ್ಯರಾಗಿದ್ದು, ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ನಂತರ ರಾಜೀನಾಮೆಯನ್ನು ಮರಳಿ ಪಡೆಯಲು ಅರ್ಜಿ ಸಲ್ಲಿಸಿರುತ್ತಾರೆ. ವಿಚಾರಣೆ ಅವಧಿಯಲ್ಲಿ ಅವರು ಸದಸ್ಯರುಗಳಾಗಿದ್ದುದರಿಂದ ಅವರನ್ನು ವಿಚಾರಣೆಗೆ ಒಳಪಡಿಸಿರುವುದು ನಿಯಮಾನುಸಾರವಿರುತ್ತದೆ.
4. ಜಿಲ್ಲಾಧಿಕಾರಿಗಳ ಕ್ರಮಕ್ಕೂ ಜಿಲ್ಲಾ ನೋಂದಣಾಧಿಕಾರಿಗಳ ವರದಿಗೂ ಯಾವ ಸಂಬಂಧವೂ ಕಾಣುವುದಿಲ್ಲ.
5. ಸಂಘದ ಕಾರ್ಯದರ್ಶಿಯವರು ವಿಚಾರಣೆಯಲ್ಲಿ ಮೂಲ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ.
6. ನ್ಯಾಯಾಲಯದ ಆದೇಶದಂತೆ ಜಿಲ್ಲಾ ನೋಂದಣಾಧಿಕಾರಿಗಳು ಮರುವಿಚಾರಣೆ ಪ್ರಕ್ರಿಯೆ ಪ್ರಾರಂಭಿಸಿರುವ ಸಂದರ್ಭದಲ್ಲಿ ಪ್ರಕರಣವನ್ನು ಪಕ್ಕದ ಜಿಲ್ಲೆಗಳಿಗೆ ವರ್ಗಾಯಿಸಿದಲ್ಲಿ ವಿಚಾರಣೆಗೆ ಹಾಜರಾಗಲು ಆಸಕ್ತಿಯುಳ್ಳ ಸದಸ್ಯರುಗಳಿಗೆ ಮತ್ತು ಪದಾಧಿಕಾರಿಗಳಿಗೆ ಅನಾನುಕೂಲವಾಗುವುದರಿಂದ ಈ ಪ್ರಕರಣದ ಮಧ್ಯೆ ಪ್ರವೇಶಿಸಲು ಅವಕಾಶವಿರುವುದಿಲ್ಲವೆಂದು ತಿಳಿಸಿ ಸಂಘದ ಕಾರ್ಯದರ್ಶಿಯವರ ಪರ ವಕೀಲರಿಗೆ ದಿನಾಂಕ: 16-12-2004ರಂದು ಹಿಂಬರಹ ನೀಡಲಾಗಿದೆ.
7. ಸಂಘದ ಕಾರ್ಯದರ್ಶಿಗಳ ಪರ ವಕೀಲರು ದಿನಾಂಕ: 9-12-2004ಕ್ಕೆ ನಿಗದಿಪಡಿಸಲಾಗಿದ್ದ ವಿಚಾರಣೆ ದಿನಾಂಕವನ್ನು ಮುಂದೂಡುವಂತೆ ಕೋರಿ ಸಲ್ಲಿಸಲಾಗಿದೆ ಎಂದು ಹೇಳಲಾಗಿರುವ ತಂತಿ ಸಂದೇಶವು ಜಿಲ್ಲಾ ನೋಂದಣಾಧಿಕಾರಿಗಳಿಗೆ ತಲುಪಿದ ಬಗ್ಗೆ ಮಾಹಿತಿ ಇರುವುದಿಲ್ಲ. ಸಂಘದ ಕಾರ್ಯದರ್ಶಿಗಳು ಮತ್ತು ಅವರ ಪರ ವಕೀಲರು ಪದೇ ಪದೇ ವಿಚಾರಣೆ ದಿನಾಂಕವನ್ನು ಮುಂದೂಡುವಂತೆ ಕೋರಿರುವುದು ಹಾಗೂ ಪದೇ ಪದೇ ಗೈರುಹಾಜರಾಗಿರುವುದು ನ್ಯಾಯ ಸಮ್ಮತವಿರುವುದಿಲ್ಲ.
8. ಜಿಲ್ಲಾ ನೋಂದಣಾಧಿಕಾರಿಗಳು ನಿಷ್ಪಕ್ಷಪಾತವಾಗಿ ಹಾಗೂ ನಿಯಮಾನುಸಾರ ವಿಚಾರಣೆ ನಡೆಸಿರುವುದು ಪರಿಶೀಲನೆಯಿಂದ ಕಂಡುಬರುತ್ತದೆ.
9. ಸಂಘದ ಕಾರ್ಯಕಾರಿ ಮಂಡಳಿಯನ್ನು ದಿನಾಂಕ: 24-2-1999ರಂದು ನಡೆಸಲಾಯಿತೆನ್ನಲಾದ ಸರ್ವ ಸದಸ್ಯರ ಸಭೆಯಲ್ಲಿ ಆಯ್ಕೆ ಮಾಡಿರುವುದಾಗಿ ಸಂಘದ ಕಾರ್ಯದರ್ಶಿಗಳು ನ್ಯಾಯಾಲಯಕ್ಕೆ ಸಲ್ಲಿಸಿರುವ ದಾಖಲೆಗಳಿಂದ ತಿಳಿದು ಬರುತ್ತದೆ. ಆದರೆ ಶ್ರಿ ಭೀಮಪ್ಪ ಹಾಗೂ ಶ್ರೀ ಪಿ. ಪಕೀರಪ್ಪ ಇವರುಗಳು ಅನುಕ್ರಮವಾಗಿ ದಿನಾಂಕ:25-2-1998 ಮತ್ತು 18-3-1998 ರಂದು ಮರಣ ಹೊಂದಿದ್ದು, ಮರಣ ಹೊಂದಿದ ನಂತರವೂ ಕಾರ್ಯಕಾರಿ ಸಮಿತಿಗೆ ಆಯ್ಕೆ ಮಾಡಿರುವುದು ಅತ್ಯಂತ ವಿಷಾದನೀಯವೆಂದು ಜಿಲ್ಲಾ ನೋಂದಣಾಧಿಕಾರಿಗಳು ಅವರ ವರದಿಯಲ್ಲಿ ತಿಳಿಸಿರುತ್ತಾರೆ.

8. ಈ ಪ್ರಕರಣದ ಬಹುಮುಖ್ಯ ಅಂಶವೆಂದರೆ, 13 ಸದಸ್ಯರಿರುವ ಈ ಸಂಘದಲ್ಲಿ 5 ಸದಸ್ಯರು ಮರಣ ಹೊಂದಿರುತ್ತಾರೆ, 4 ಸದಸ್ಯರು ತಮ್ಮ ಸದಸ್ಯತ್ವಕ್ಕೆ ರಾಜೀನಾಮೆ ನೀಡಿರುತ್ತಾರೆ, ಉಳಿದ 4 ಸದಸ್ಯರು ಮುಂದುವರೆದಿರುತ್ತಾರಾದರೂ ಕಾರ್ಯದರ್ಶಿಯವರು ಮಾತ್ರ ಇದ್ದು, ಉಳಿದ 3 ಸದಸ್ಯರ ಅಸ್ತಿತ್ವದ ಬಗ್ಗೆ ಜಿಲ್ಲಾ ನೋಂದಣಾಧಿಕಾರಿಗಳು ಸಂಶಯ ವ್ಯಕ್ತಪಡಿಸಿರುತ್ತಾರೆ.

9. 1960ರ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆಯ ಕಲಂ 4 & 5 ಪ್ರಕಾರ ಒಂದು ಸಂಘದ ಅಸ್ತಿತ್ವಕ್ಕೆ ಕನಿಷ್ಠ 7 ಸದಸ್ಯರ ಅವಶ್ಯಕತೆ ಇರುತ್ತದೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯಂತೆ ಈ ಸಂಘದಲ್ಲಿ ಕೇವಲ ಒಬ್ಬರು ಮಾತ್ರ ಇದ್ದು ಇವರೇ ಸಂಘದ ಕಾರ್ಯದರ್ಶಿ ಕರ್ತವ್ಯವನ್ನು ನಿರ್ವಹಿಸುತ್ತಿರುವುದು ಕಂಡುಬರುತ್ತದೆ.

10. ಜಿಲ್ಲಾ ನೋಂದಣಾಧಿಕಾರಿಗಳು ಆಡಳಿತಾಧಿಕಾರಿಗಳನ್ನು ನೇಮಿಸಲು ಕೋರಿ ಮೇಲೆ ಓದಲಾದ 1 & 4 ರಲ್ಲಿ ಸಲ್ಲಿಸಿರುವ ವರದಿಯನ್ನು ಮತ್ತು ಮೇಲೆ ಓದಲಾದ 6 ರಲ್ಲಿ ಸಂಘದ ಕಾರ್ಯದರ್ಶಿಯವರು ಸಲ್ಲಿಸಿರುವ ಆಕ್ಷೇಪಣಾ ಹೇಳಿಕೆಯನ್ನು

ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಸಂಘವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 4 & 5 ಹಾಗೂ 11 & 13ರನ್ನು ಉಲ್ಲಂಘಿಸಿರುವುದು ಕಂಡು ಬಂದಿರುವುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಅಗತ್ಯವಿದೆಯೆಂದು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 38 ಮುನೊಸೊ 2004, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಂಘದ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಆದಿಕರ್ನಾಟಕ ವಿದ್ಯಾಭಿವೃದ್ಧಿ ಸಂಘ(ರಿ) ಪಿ.ಜೆ.ಬಡಾವಣೆ ದಾವಣಗೆರೆ, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-A(1) (ಸಿ) ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್, ದಾವಣಗೆರೆ ಇವರನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಘಕ್ಕೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರ ಮಾಡುವವರೆಗೆ ಅಥವಾ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿಯನ್ನಾಗಿ ನೇಮಿಸಿದೆ.

ಆಡಳಿತಾಧಿಕಾರಿಯವರು ಕೂಡಲೇ ಸಂಘದ ಕಾರ್ಯಭಾರವನ್ನು ವಹಿಸಿಕೊಂಡು, ಸಂಘದ ಅವ್ಯವಹಾರಗಳನ್ನು ಸರಿಪಡಿಸಿ ನಿಗದಿಪಡಿಸಿದ ಅವಧಿಯೊಳಗೆ ಸಂಘಕ್ಕೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 662 ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶ್ರೀ ಎಸ್.ಆರ್.ಪಾಟೀಲ್, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಬೈಲಹೊಂಗಲ, ಬೆಳಗಾಂ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಕುರಿತು.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ಕೊಪ್ಪಳ ಜಿಲ್ಲೆ, ಕೊಪ್ಪಳ ಇವರ ಪತ್ರದ ಸಂ.ಸಿಬ್ಬಂದಿ-1/ಸಿಸಿಎ/2004-05/863, ದಿನಾಂಕ:3-6-2004.
2) ದಿನಾಂಕ:25-10-04ರ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆರ್‌ಡಿ 29 ಎಡಿಇ 2004.
3) ಶ್ರೀ ಎಸ್.ಆರ್.ಪಾಟೀಲ್ ರವರ ದಿನಾಂಕ:6-11-2004ರ ಲಿಖಿತ ಸಮಜಾಯಿಷಿ.

**ಪ್ರಸ್ತಾವನೆ:**

ಶ್ರೀ ಎಸ್.ಆರ್.ಪಾಟೀಲ್ ಇವರು ಹಿಂದೆ ಗಂಗಾವತಿ ತಾಲ್ಲೂಕು ತಹಶೀಲ್ದಾರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಚುನಾವಣಾ ಕೆಲಸದಲ್ಲಿ ಆಸಕ್ತಿ ವಹಿಸದೆ, ದಿನಾಂಕ:11-4-2004ರ ಮಧ್ಯಾಹ್ನ ಗೈರು ಹಾಜರಾಗಿದ್ದು ಚುನಾವಣಾ ಕೆಲಸಕ್ಕೆ ನಿಯೋಜಿಸಬೇಕಾದ ಸಿಬ್ಬಂದಿಯ ತರಬೇತಿಗಾಗಿ ಯಾವ ಪೂರ್ವಸಿದ್ಧತೆಗಳನ್ನು ಮಾಡಿಕೊಂಡಿರದೆ ಹಾಗೂ ಎಲೆಕ್ಟ್ರಾನಿಕ್ ಮತ ಯಂತ್ರಗಳ ತೃಪ್ತಿಕರ ಕಾರ್ಯನಿರ್ವಹಣೆ ಬಗ್ಗೆ ಅವುಗಳನ್ನು ಪರೀಕ್ಷಿಸದೆ ಸರಿಪಡಿಸುವ ಕೆಲಸ ನಡೆಯುತ್ತಿರುವಾಗ ಸಮಯಕ್ಕೆ ಸರಿಯಾಗಿ ಹಾಜರಾಗದೆ, ಹಾಗೂ ಚುನಾವಣೆಯ ದಿನ ಹಾಗೂ ಚುನಾವಣೆಯ ಮರುದಿನ ಅಂದರೆ ದಿನಾಂಕ:20-4-2004 ಹಾಗೂ 21-4-2004 ರಂದು ಚುನಾವಣಾ ಕೆಲಸಕ್ಕೆ ಗೈರು ಹಾಜರಾಗಿ ಚುನಾವಣಾ ಕಾರ್ಯನಿರ್ವಹಿಸುವಲ್ಲಿ ನಿರ್ಲಕ್ಷತೆ ತೋರಿ ಕರ್ತವ್ಯಲೋಪ ಎಸಗಿದ್ದು, ಸದರಿ ಅಧಿಕಾರಿಯವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವಂತೆ ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ: 03-06-2004ರ ಪತ್ರದಲ್ಲಿ ಕೊಪ್ಪಳ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು(ಅನುಬಂಧ 1ರಿಂದ 4ರವರೆಗೆ) ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆಗಳನ್ನು ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ:25-10-2004ರಂದು ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರಕ್ಕೆ ಅನುಗುಣವಾಗಿ ಶ್ರೀ ಎಸ್.ಆರ್.ಪಾಟೀಲ್ ರವರು ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ದಿನಾಂಕ: 6-11-2004ರಂದು ಲಿಖಿತ ಹೇಳಿಕೆಯನ್ನು ಸಲ್ಲಿಸಿ ಅವರ ವಿರುದ್ಧದ ಎಲ್ಲಾ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆಯೆಂದು ತಿಳಿಸಿ ಆ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ ಹಾಗೂ ಸದರಿ ಆರೋಪಗಳಿಂದ ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧದ ಆರೋಪಗಳು ಹಾಗೂ ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ನಿರ್ಧರಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಸೂಕ್ತವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 29 ಎಡಿಇ 2004, ಬೆಂಗಳೂರು, ದಿನಾಂಕ: 9ನೇ ಮೇ 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಎಸ್.ಆರ್.ಪಾಟೀಲ್, ಹಿಂದಿನ ತಹಶೀಲ್ದಾರ್, ಗಂಗಾವತಿ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಬೈಲಹೊಂಗಲ, ಬೆಳಗಾಂ ಜಿಲ್ಲೆ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಕುಲಕರ್ಣಿ ರಾಮರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ತುರುವಿಹಾಳ್ ಪೋಸ್ಟ್, ಸಿಂಧನೂರು ತಾಲ್ಲೂಕು ರಾಯಚೂರು ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೊಪ್ಪಳ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ರಾಯಚೂರು ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-2002ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ(ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಕೊಪ್ಪಳ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಮಹಂತೇಶಯ್ಯ**

ಪಿ.ಆರ್. 679 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು-3).

**ವಿಷಯ:** ಶ್ರೀ ಜಿ.ವಿ.ವೆಂಕಟೇಶಪ್ಪ, ಹಿಂದಿನ ತಹಸೀಲ್ದಾರ್, ತುಮಕೂರು ತಾಲ್ಲೂಕು, ಪ್ರಸ್ತುತ ತಹಸೀಲ್ದಾರ್, ಹಾಸನ ತಾಲ್ಲೂಕು ಇವರಿಗೆ ದಂಡನೆ ವಿಧಿಸಿ ಆದೇಶಿಸುವ ಕುರಿತು.

**ಓದಲಾಗಿದೆ:**
1) ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ:ಸಿಬ್ಬಂದಿ (1):ಸಿಆರ್:4:2000-01, ದಿನಾಂಕ:16-1-2001.
2) ದಿನಾಂಕ:15-9-2001ರ ತಿಳುವಳಿಕೆ ಪತ್ರ ಸಂಖ್ಯೆ:ಕಂಇ 23 ಎಡಿಇ 2000.
3) ಶ್ರೀ ಜಿ.ವಿ.ವೆಂಕಟೇಶಪ್ಪ, ತಹಸೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 9-11-2001.
4) ದಿನಾಂಕ:22-4-2002ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 23 ಎಡಿಇ 2000.
5) ವಿಚಾರಣಾಧಿಕಾರಿಗಳ ವರದಿ ದಿನಾಂಕ:2-8-2003.
6) ದಿನಾಂಕ:7-4-2004ರ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಕಂಇ 23 ಎಡಿಇ 2000.
7) ಶ್ರೀ ಜಿ.ವಿ.ವೆಂಕಟೇಶಪ್ಪ, ತಹಸೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 18-5-2004.
8) ಕರ್ನಾಟಕ ಲೋಕಸೇವಾ ಆಯೋಗವು ಸಹಮತಿ ನೀಡಿರುವ ಪತ್ರದ ದಿನಾಂಕ: 3-2-2005.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ತುಮಕೂರು ತಾಲ್ಲೂಕು ಬಟವಾಡಿ ಗ್ರಾಮ ಸರ್ವೆ ನಂ.61/1ಬಿ ರಲ್ಲಿನ ಖಾತೆ ಬದಲಾವಣೆ ವಿಷಯದಲ್ಲಿ ನಿಯಮಬಾಹಿರವಾಗಿ ಖಾತೆ ಬದಲಾವಣೆ ಮಾಡಲು ಆದೇಶಿಸಿರುವುದರ ಮೂಲಕ ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 129(2) ಮತ್ತು ಕರ್ನಾಟಕ ಭೂ ಕಂದಾಯ ನಿಯಮಾವಳಿಗಳ ನಿಯಮ 64(2) ಮತ್ತು 65, 66ಅನ್ನು ಉಲ್ಲಂಘಿಸಿರುವುದಲ್ಲದೆ, ಇದರನ್ವಯ ಹಕ್ಕು ಬದಲಾವಣೆ ಅಂಗೀಕರಿಸಿದ ನಂತರ ಸದರಿ ಆದೇಶವನ್ನು ಹಕ್ಕು ಬದಲಾವಣೆ ಅಂಗೀಕರಿಸಿದ ಅಧಿಕಾರಿ ರದ್ದುಪಡಿಸಲು ಅವಕಾಶವಿಲ್ಲದಿದ್ದರೂ ಸಹ ತುಮಕೂರಿನ ಅಂದಿನ ತಹಸೀಲ್ದಾರರಾದ ಶ್ರೀ ಜಿ.ವಿ.ವೆಂಕಟೇಶಪ್ಪರವರೇ ಅಂಗೀಕರಿಸಿದ ಹಕ್ಕು ಬದಲಾವಣೆ ಸಂಖ್ಯೆ:17/99-2000, 18/99-2000 ರಲ್ಲಿಯ ದಿನಾಂಕ: 19-2-2000ರ ಆದೇಶದಂತೆ ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 70ರಡಿ ಸರ್ವೆ ನಂ:60/1(ಬಿ)ಯ ಆರ್.ಟಿ.ಸಿ.ಯಲ್ಲಿ ನಮೂದಿಸಿರುವ ಕ್ರಯದಾರರ ಹೆಸರನ್ನು ಆರ್.ಆರ್.ಟಿ. ಡಿ.ಎಸ್.ಎಂ.ಸಿಆರ್/157/ 99-2000, ದಿನಾಂಕ: 3-3-2000ರನ್ವಯ ತಿದ್ದುಪಡಿ ಮಾಡಿ, ಈ ಮೊದಲಿದ್ದ ದಾಖಲೆಯನ್ನು ಮುಂದುವರೆಸಲು ಅವರ ಅಧಿಕಾರ ವ್ಯಾಪ್ತಿ ಮೀರಿ ಆದೇಶಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದೆಂದು ವರದಿ ಮಾಡಿರುವ ತುಮಕೂರು ಜಿಲ್ಲಾಧಿಕಾರಿಗಳು, ಈ ಅಕ್ರಮ ಖಾತೆ ಬದಲಾವಣೆಗೆ ಕಾರಣಕರ್ತರೆನ್ನಲಾದ ಈ ಕೆಳಕಂಡ ಅಧಿಕಾರಿ /ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಜರುಗಿಸುವಂತೆ, ದೋಷಾರೋಪಣೆ ಪಟ್ಟಿಯನ್ನು ಅನುಬಂಧ 1 ರಿಂದ 4ರವರೆಗೆ ತಯಾರಿಸಿ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 16-1-2001ರ ಪತ್ರದಲ್ಲಿ ಕಳುಹಿಸಿದ್ದಾರೆ.

1) ಶ್ರೀ ಜಿ.ವಿ.ವೆಂಕಟೇಶಪ್ಪ, ಹಿಂದಿನ ತಹಸೀಲ್ದಾರ್, ತುಮಕೂರು ತಾಲ್ಲೂಕು, ಪ್ರಸ್ತುತ ತಹಸೀಲ್ದಾರ್, ಹಾಸನ ತಾಲ್ಲೂಕು, ಹಾಸನ ಜಿಲ್ಲೆ
2) ಶ್ರೀ ಜ್ಞಾನಚಂದ್ರ ಗುಪ್ತ, ಹಿಂದಿನ ಕಂದಾಯ ನಿರೀಕ್ಷಕರು, ಕಸಬಾ ಹೋಬಳಿ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ.
3) ಶ್ರೀ ಟಿ.ದೊಡ್ಡಯ್ಯ, ಗ್ರಾಮ ಲೆಕ್ಕಿಗ, ಶೆಟ್ಟಿಹಳ್ಳಿ ವೃತ್ತ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ.

ಅದರಂತೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 15-09-2001ರ ತಿಳುವಳಿಕೆ ಪತ್ರದಲ್ಲಿ ಮೇಲ್ಕಾಣಿಸಿದ ಅಧಿಕಾರಿ/ನೌಕರರಿಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 13ರ ಅನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಉದ್ದೇಶಿಸಲಾಗಿದೆಯೆಂದು ತಿಳಿಸುತ್ತಾ, ಅವರ ಲಿಖಿತ ಸಮಜಾಯಿಷಿ ಕೋರಲಾಗಿತ್ತು. ಅದರಂತೆ ಈ ತಿಳುವಳಿಕೆ ಪತ್ರಕ್ಕೆ ಶ್ರೀ ಜಿ.ವಿ.ವೆಂಕಟೇಶಪ್ಪ, ತಹಸೀಲ್ದಾರ್ ಇವರು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ:9-11-2001 ರಂದು ಉತ್ತರ ನೀಡಿ ತಾವು ಯಾವುದೇ ಹಂತದಲ್ಲಿ ಭೂ ಕಂದಾಯ ಅಧಿನಿಯಮ 1964ರ ಯಾವುದೇ ಕಲಂ ಉಲ್ಲಂಘನೆ ಮಾಡಿರುವುದಿಲ್ಲವೆಂದು ತಿಳಿಸುತ್ತಾ ತಮ್ಮ ವಿರುದ್ಧ ಮಾಡಿರುವ ಆರೋಪಗಳನ್ನು ರದ್ದುಪಡಿಸಲು ಕೋರಿರುತ್ತಾರೆ. ಈ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಆರೋಪಿತ ಅಧಿಕಾರಿ ನೌಕರರು ಸಲ್ಲಿಸಿರುವ ಲಿಖಿತ ಸಮಜಾಯಿಷಿಗಳನ್ನು ಒಪ್ಪಿಕೊಂಡಿಲ್ಲವಾದ್ದರಿಂದ ಅವರುಗಳ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ

ಶ್ರೀ ವೈ.ಆರ್.ಸಾಹುಕಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ಇಲಾಖಾ ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಮಂಡನಾಧಿಕಾರಿಯಾಗಿ ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ದಿನಾಂಕ: 22-4-2002ರ ಆದೇಶದಲ್ಲಿ ನೇಮಿಸಲಾಗಿದೆ.

ಸದರಿ ಆದೇಶದಂತೆ ಇಲಾಖಾ ವಿಚಾರಣಾಧಿಕಾರಿಗಳು ಆಪಾದಿತರಾದ ಶ್ರೀ ಜಿ.ವಿ.ವೆಂಕಟೇಶಪ್ಪ, ತಹಸೀಲ್ದಾರ್ ಇವರ ಮೇಲೆ ಹೊರಿಸಲಾದ ಆರೋಪಗಳು ರುಜುವಾತಾಗಿರುತ್ತವೆ ಮತ್ತು ಆಪಾದಿತ ನೌಕರರಾದ ಶ್ರೀ ಜ್ಞಾನಚಂದ್ರಗುಪ್ತ, ರಾಜಸ್ವ ನಿರೀಕ್ಷಕರು ಮತ್ತು ಶ್ರೀ ಟಿ.ದೊಡ್ಡಯ್ಯ, ಗ್ರಾಮಲೆಕ್ಕಿಗ ಇವರ ಮೇಲೆ ಹೊರಿಸಲಾದ ಆರೋಪಗಳು ರುಜುವಾತು ಆಗಿರುವುದಿಲ್ಲವೆಂದು ಅಭಿಪ್ರಾಯಪಟ್ಟು ಮೇಲೆ ಕ್ರಮಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 2-8-2003ರಂದು ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಈ ವಿಚಾರಣಾ ವರದಿಯನ್ನು ಸರ್ಕಾರವು ಪರಿಶೀಲಿಸಿ ಶ್ರೀ ಜಿ.ವಿ.ವೆಂಕಟೇಶಪ್ಪ, ಹಿಂದಿನ ತಹಸೀಲ್ದಾರ್, ತುಮಕೂರು ತಾಲ್ಲೂಕು ಇವರ ವಿರುದ್ಧ ಗಂಭೀರವಾದ ಆರೋಪಗಳಿದ್ದು, ಸದರಿ ಆರೋಪಗಳು ವಿಚಾರಣೆಯಲ್ಲಿ ರುಜುವಾತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8ರಡಿಯಲ್ಲಿ ಯಾವುದಾದರೂ ಒಂದು ದಂಡನೆಯನ್ನು ಏಕೆ ವಿಧಿಸಬಾರದೆಂದು ಕೇಳಿ ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 7-4-2004 ರಂದು ವಿಚಾರಣಾ ವರದಿಯೊಂದಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ಅವರಿಗೆ ಜಾರಿ ಮಾಡಲಾಗಿತ್ತು. ಈ ನೋಟಿಸಿಗೆ ಉತ್ತರವಾಗಿ ಸದರಿ ಅಧಿಕಾರಿಯು ವಿವಿಧ ಕಾರಣಗಳನ್ನು ನೀಡಿ ವಿಚಾರಣಾ ವರದಿಯ ಪ್ರಕಾರ ಗುರುತರವಾದ ಕರ್ತವ್ಯಲೋಪಗಳಿರುವುದಿಲ್ಲ, ಕೇವಲ ಆದೇಶಕ್ಕೆ ಮೊದಲು ಆಸಕ್ತರಿಗೆ ನೋಟೀಸ್ ನೀಡಿಲ್ಲ, Procedure Lapse ಮಾತ್ರ ಆಗಿದೆ ಎಂದು ತಿಳಿಸುತ್ತಾ ತಮ್ಮನ್ನು ಆರೋಪದಿಂದ ಮುಕ್ತಗೊಳಿಸುವಂತೆ ಮೇಲೆ ಕ್ರಮಸಂಖ್ಯೆ (7) ರಲ್ಲಿ ಓದಲಾದ ದಿನಾಂಕ:18-5-2004ರ ತಮ್ಮ ಲಿಖಿತ ಸಮಜಾಯಿಷಿಯಲ್ಲಿ ಕೋರಿರುತ್ತಾರೆ. ಈ ಉತ್ತರವನ್ನು ಸರ್ಕಾರವು ಪರಿಶೀಲಿಸಿ, ಸದರಿ ಉತ್ತರವನ್ನು ಒಪ್ಪಿಕೊಳ್ಳದೇ ಇವರ ವಿರುದ್ಧ ತಹಸೀಲ್ದಾರ್ ಗುಂಪು-ಬಿ ವೃಂದದಿಂದ ಶಿರಸ್ತೇದಾರ್/ ಉಪತಹಸೀಲ್ದಾರ್ ವೃಂದಕ್ಕೆ ಹಿಂಬಡ್ತಿ ನೀಡುವ ದಂಡನೆಯನ್ನು ವಿಧಿಸಲು ನಿರ್ಧರಿಸಿ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ: 3-2-2005ರಂದು ಕರ್ನಾಟಕ ಲೋಕಸೇವಾ ಆಯೋಗವು ಸರ್ಕಾರದ ಈ ಪ್ರಸ್ತಾವನೆಗೆ ಸಹಮತಿ ನೀಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 23 ಎಡಿಇ 2000, ಬೆಂಗಳೂರು, ದಿನಾಂಕ: 6ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಜಿ.ವಿ.ವೆಂಕಟೇಶಪ್ಪ, ತಹಸೀಲ್ದಾರ್, ಹಾಸನ ತಾಲ್ಲೂಕು, ಹಾಸನ ಜಿಲ್ಲೆ ಇವರು ಈ ಹಿಂದೆ ತುಮಕೂರು ತಾಲ್ಲೂಕು ತಹಸೀಲ್ದಾರರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಎಸಗಿದ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (v) ರನ್ವಯ ಅವರು ಪ್ರಸ್ತುತ ಹೊಂದಿರುವ **ತಹಸೀಲ್ದಾರ್ ಹುದ್ದೆಯಿಂದ** (ಗುಂಪು-ಬಿ ವೃಂದದ ವೇತನ ಶ್ರೇಣಿ6000-150-7200-200-8800-260-10880-320-11200) **ಶಿರಸ್ತೇದಾರ್/ಉಪ ತಹಸೀಲ್ದಾರ್ ಹುದ್ದೆಗೆ** (ಗುಂಪು-ಸಿ ವೃಂದದ ವೇತನ ಶ್ರೇಣಿ 5200-125-5700-150-7200-200-8800-260-9580) **ಖಾಯಂ ಆಗಿ ಹಿಂಬಡ್ತಿಗೊಳಿಸುವ ದಂಡನೆಯನ್ನು** ವಿಧಿಸಿ ಆದೇಶಿಸಲಾಗಿದೆ.

ಈ ಆದೇಶವು ಜಾರಿಯಲ್ಲಿರುವಾಗ ಈ ನೌಕರರು ಕಾಲವೇತನ ಶ್ರೇಣಿಗೆ ಅಥವಾ ಮೇಲಿನ ಹುದ್ದೆಗೆ ಬಡ್ತಿ ಹೊಂದಲು ಅರ್ಹರಿರುವುದಿಲ್ಲ.

ಅಲ್ಲದೇ ಈ ಆದೇಶವು ಜಾರಿಯಲ್ಲಿರುವಾಗ ಜೇಷ್ಠತಾ ನಿಯಮಾವಳಿಗಳನ್ವಯ ಇವರು ತಮ್ಮ ಜೇಷ್ಠತೆಯನ್ನು ಪಡೆಯಲು ಹಾಗೂ ನಿವೃತ್ತಿ ನಂತರ ಪುನರ್ನಿಗದಿಪಡಿಸಲಾಗುವ ನಿವೃತ್ತಿ ವೇತನ ಪಡೆಯಲು ಅರ್ಹರಿರುವುದಿಲ್ಲ. ಇವರಿಗೆ ಲಭ್ಯವಾಗುವ ವಾರ್ಷಿಕ ವೇತನ ಬಡ್ತಿಯನ್ನು ಹಿಂಬಡ್ತಿಗೊಳಿಸಲಾದ ಹುದ್ದೆಯ ವೇತನ ಶ್ರೇಣಿಯಲ್ಲಿಯೇ ಪಡೆಯತಕ್ಕದ್ದು.

ಈ ಆದೇಶದಂತೆ ಹಾಸನ ಜಿಲ್ಲಾಧಿಕಾರಿಗಳು ತಕ್ಷಣ ಶ್ರೀ ಜಿ.ವಿ.ವೆಂಕಟೇಶಪ್ಪ, ಇವರನ್ನು ಹಾಸನ ತಾಲ್ಲೂಕು ತಹಸೀಲ್ದಾರ್ ಹುದ್ದೆಯಿಂದ ಬಿಡುಗಡೆಗೊಳಿಸಿ ಸರ್ಕಾರದಲ್ಲಿ ಹಾಜರಾಗಲು ಸೂಚಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್.ಮಹಂತೇಶಯ್ಯ**

ಪಿ.ಆರ್. 677 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ(ಸೇವೆಗಳು-3).

**ಆದೇಶ ಸಂಖ್ಯೆ: ಕಂಇ 196 ಮುಸೇವಿ 2004 (ಭಾಗ), ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 2005**

ಗೋಮಟೇಶ್ವರ ಭಗವಾನ್ ಶ್ರೀ ಬಾಹುಬಲಿ ಮಹಾಮಸ್ತಕಾಭಿಷೇಕ ಮಹೋತ್ಸವ 2006 ಸಮಿತಿ ರಚನೆ ಕುರಿತು ಸರ್ಕಾರದ ಆದೇಶ **ಸಂಖ್ಯೆ: ಕಂಇ 196 ಮುಸೇವಿ 2004 ದಿನಾಂಕ: 12.08.2004ರ** ಆದೇಶದಲ್ಲಿ ಹಾಗೂ ಆದೇಶ ಸಂಖ್ಯೆ: ಕಂಇ 196 ಮುಸೇವಿ 2004 ಭಾಗ-1 ದಿನಾಂಕ: 16.03.2004 ಆದೇಶಗಳಲ್ಲಿ ರಚಿಸಿದ ರಾಜ್ಯ ಮಟ್ಟದ ಸಮಿತಿಗೆ ಈ ಕೆಳಕಂಡ ಸದಸ್ಯರನ್ನು ಸೇರ್ಪಡೆಗೊಳಿಸಿ, ಆದೇಶಿಸಿದೆ.

**ಕ್ಷೇತ್ರದ ಹಾಗೂ ಸಮಾಜದ ಪ್ರತಿನಿಧಿಗಳು**

12) ಶ್ರೀ ಹೆಚ್.ಎ. ಸನ್ಮತಿ ಜೈನ್, ತಂದೆ ಹೆಚ್.ಆರ್. ಅನಂತರಾಜು, ರಾಯಪ್ಪ ಕಾಂಪೌಂಡ್ ಹರಪನಹಳ್ಳಿ ರಸ್ತೆ, ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ.
13) ಶ್ರೀ ಬಿ.ಎಂ. ಜಯಪ್ರಕಾಶ ಬಿನ್ ಲೇಟ್ ಕೆ.ಎಸ್. ಮಲ್ಲಪ್ಪ 205, ಮಧುವನ್, 7 ಕ್ರಾಸ್, ಶಾಸ್ತ್ರಿನಗರ, ಬೆಂಗಳೂರು-560 028.
14) ಶ್ರೀ ಎಸ್.ಎಂ. ಪ್ರೇಮಕುಮಾರ ಜೈನ್, ಪದ್ಮಾಂಬ ಚಿತ್ರಮಂದಿರ, ರಾಮನಾಥಪುರ ರಸ್ತೆ, ಸಾಲಿಗ್ರಾಮ-571 604, ಕೆ.ಆರ್.ನಗರ ತಾಲ್ಲೂಕು, ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 615 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:-** ಪುರಸಭಾ ನೌಕರರನ್ನು ಕರ್ನಾಟಕ ಮುನಿಸಿಪಾಲಿಟಿ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳೆಂದು (ಕೆಎಂಎಸ್) ಆದೇಶಿಸುವ ಬಗ್ಗೆ.

**ಓದಲಾಗಿದೆ** 1. ಸರ್ಕಾರಿ ಆದೇಶ ಸಂಖ್ಯೆ:ನಅಇ 258 ಇಎಂಸಿ 94, ದಿನಾಂಕ:9-12-98.

2. ಪೌರಾಡಳಿತ ನಿರ್ದೇಶಕರ ಪತ್ರ ಸಂಖ್ಯೆ-ಪೌನಿ/ಕೆಎಂಎಸ್/ಸಿಆರ್-09/04-05, ದಿನಾಂಕ:25-08-2004.

ಪ್ರಸ್ತಾವನೆ:

ಮೇಲೆ ಓದಲಾದ (1)ರ ಸರ್ಕಾರಿ ಆದೇಶ ಸಂಖ್ಯೆ-ನಅಇ 258 ಇಎಂಸಿ 94, ದಿನಾಂಕ:9-12-98ರ ಕಾರ್ಯಕಾರಿ ಆದೇಶದ ಪ್ರಕಾರ ಈ ಕೆಳಕಂಡ ವೃಂದಗಳಲ್ಲಿ 5 ವರ್ಷ ಸೇವೆ ಸಲ್ಲಿಸಿದ ನೌಕರರನ್ನು ಶೇಕಡಾವಾರು ಸಂಖ್ಯೆಯಲ್ಲಿ ಕರ್ನಾಟಕ ಪೌರಾಡಳಿತ ಸೇವಾ ವೃಂದದ ಮುಖ್ಯಾಧಿಕಾರಿ ಶ್ರೇಣಿ-2ರ ಹುದ್ದೆಗೆ ಸೇರ್ಪಡೆ ಮಾಡಲು ಈ ಕೆಳಕಂಡಂತೆ ಅವಕಾಶವನ್ನು ಕಲ್ಪಿಸಲಾಗಿದೆ:-

| | |
|---|---|
| (1) ನೇರ ನೇಮಕಾತಿ ಮೂಲಕ ಶೇಕಡ 33.33 | 33 ಹುದ್ದೆಗಳು |
| (2) ಪೌರ ಸೇವಾ ವೃಂದದ ನೌಕರರಿಂದ ಆಯ್ಕೆ- | |
| (ಅ) ಕಛೇರಿ ವ್ಯವಸ್ಥಾಪಕರು ಶೇಕಡ 24.76 | 25 ಹುದ್ದೆಗಳು |
| (ಆ) ಕಂದಾಯ ಅಧಿಕಾರಿಗಳು ಶೇಕಡ 19.05 | 19 ಹುದ್ದೆಗಳು |
| (ಇ) ಹಿರಿಯ ಆರೋಗ್ಯ ನಿರೀಕ್ಷಕರು ಶೇಕಡ 22.85 | 23 ಹುದ್ದೆಗಳು |
| **ಒಟ್ಟು** | **100 ಹುದ್ದೆಗಳು** |

ಮೇಲೆ ಓದಲಾದ (2)ರ ಪತ್ರದಲ್ಲಿ ಪೌರಾಡಳಿತ ನಿರ್ದೇಶಕರು, ಬೆಂಗಳೂರು ಇವರ ಪ್ರಸ್ತುತ 54 ಖಾಲಿ ಹುದ್ದೆಗಳು ಲಭ್ಯವಿದ್ದು ಈ ಪೈಕಿ 18 ಹುದ್ದೆಗಳು ನೇರ ನೇಮಕಾತಿಗಾಗಿ ಹಾಗೂ 36 ಹುದ್ದೆಗಳು ವಿಲೀನಕ್ಕಾಗಿ ಲಭ್ಯವಿರುತ್ತದೆಂದು ತಿಳಿಸಿರುತ್ತಾರೆ. ಈ ಮೊದಲು ದಿನಾಂಕ:13-07-2001 ರಂದು ವಿಲೀನಗೊಳಿಸಿದ ಸಂದರ್ಭದಲ್ಲಿ ನೇರ ನೇಮಕಾತಿಗಾಗಿ 30 ಹುದ್ದೆಗಳು ಬಾಕಿಯಿದ್ದು ಪ್ರಸ್ತುತ 18 ಹುದ್ದೆಗಳನ್ನು ಪರಿಗಣಿಸಿದರೆ ಒಟ್ಟಾರೆ 48 ಹುದ್ದೆಗಳು ನೇರ ನೇಮಕಾತಿಗೆ ಲಭ್ಯವಿರುತ್ತದೆ, ಈ ಪೈಕಿ 33 ಹುದ್ದೆಗಳನ್ನು ಭರ್ತಿ ಮಾಡಲು ಈಗಾಗಲೆ ಲೋಕ ಸೇವಾ ಆಯೋಗಕ್ಕೆ ಕೋರಿಕೆ ಸಲ್ಲಿಸಲಾಗಿದೆ.

ಸದರಿ ವಿಲೀನವನ್ನು ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ರವರು ನಿರ್ಣಯಿಸಿದ ವೃಂದದ ಜೇಷ್ಠತಾ ಪಟ್ಟಿಯನ್ವಯ ನಡೆಸಲಾಗುತ್ತದೆ. ಪ್ರಸ್ತುತ 36 (ಅಂದರೆ 54ರ 2/3) ಅಲ್ಲದೆ ಕಂದಾಯ ಅಧಿಕಾರಿಗಳ ವೃಂದದಿಂದ 12 ಬ್ಯಾಕ್ ಲಾಗ್ ಹುದ್ದೆಗಳನ್ನು ಪರಿಗಣಿಸಿದರೆ, ಒಟ್ಟಾರೆ 48 ಹುದ್ದೆಗಳನ್ನು ಪೌರಾಡಳಿತ ಸೇವಾ ಅಧಿಕಾರಿಗಳೆಂದು (ಮುಖ್ಯಾಧಿಕಾರಿ ಶ್ರೇಣಿ-2) ವಿಲೀನಗೊಳಿಸಲು ಲಭ್ಯವಿದ್ದು ಅವುಗಳ ವಿವರ ಈ ಕೆಳಕಂಡಂತೆ ಇರುತ್ತದೆ:

| | |
|---|---|
| 1. ಕಛೇರಿ ವ್ಯವಸ್ಥಾಪಕರು | 14 |
| 2. ಕಂದಾಯ ಅಧಿಕಾರಿಗಳು 12+10-5<br>(5 ಅಧಿಕಾರಿಗಳ ಕೊರತೆ ಇರುತ್ತದೆ) | 17 |
| 3. ಹಿರಿಯ ಆರೋಗ್ಯ ನಿರೀಕ್ಷಕರು | 12 |
| **ಒಟ್ಟಾರೆ** | 43 |

ಮೇಲೆ ವಿವರಿಸಿರುವ ಅಂಶಗಳನ್ನು ಗಮನಿಸಿ ಸರ್ಕಾರವು ನಿಯಮಾನುಸಾರ ಅರ್ಹತೆ ಹೊಂದಿರುವ 43 ಪುರಸಭಾ ನೌಕರರನ್ನು ಕರ್ನಾಟಕ ಮುನಿಸಿಪಾಲಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ವೇತನ ಶ್ರೇಣಿ 4575-8400ರಲ್ಲಿ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಗೆ ವಿಲೀನಗೊಳಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ನಅಇ 62 ಇಎಂಸಿ 2003, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2005**

ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಮುನಿಸಿಪಾಲಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ವಿವಿಧ ವೃಂದಗಳಲ್ಲಿ ಕೆಲಸ ಮಾಡುತ್ತಿರುವ 43 ಪುರಸಭಾ ನೌಕರರುಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಪೌರ ಸೇವಾ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ 4575-8400ರ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಯಲ್ಲಿ ಸ್ಥಾನ ಮಾನವನ್ನು ನೀಡಿ, ವೇತನವನ್ನೊಳಗೊಂಡಂತೆ ಎಲ್ಲಾ ಸೇವಾ ಸೌಲಭ್ಯಗಳನ್ನು ಕೆಎಂಎಸ್ ಅಧಿಕಾರಿಗಳಿಗೆ ಅನ್ವಯವಾಗುವ ಸೇವಾ ನಿಯಮಾವಳಿ ಗೊಳಪಟ್ಟು ಹಾಗೂ ಈ ಕೆಳಕಂಡ ನಿಬಂಧನೆಗೊಳಪಡಿಸಿ ವಿಲೀನಗೊಳಿಸಿ ಆದೇಶಿಸಲಾಗಿದೆ.

1. ಈ ಎಲ್ಲಾ ನೌಕರರುಗಳು ಸರ್ಕಾರದ ಆದೇಶ ಸಂಖ್ಯೆ:-ನಅಇ 258 ಇಎಂಸಿ 94, ದಿನಾಂಕ:9-12-98 ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.
2. ಪ್ರಸ್ತುತ ಹೊರಡಿಸಿರುವ ವಿವಿಧ ವೃಂದಗಳ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಯಾವುದೇ ಮಾರ್ಪಾಡುಗಳನ್ನು ಮಾಡಲು ನ್ಯಾಯಾಲಯಗಳು ಆದೇಶಿಸಿದಲ್ಲಿ, ಆ ಪ್ರಕಾರ ಪೌರಾಡಳಿತ ನಿರ್ದೇಶಕರು 2 ತಿಂಗಳೊಳಗಾಗಿ ಈ ಬಗ್ಗೆ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಿ, ಸರ್ಕಾರಕ್ಕೆ ತಿಳಿಸತಕ್ಕದ್ದು.

ಈ ನೌಕರರುಗಳಿಗೆ ಕೆ.ಎಂ.ಎ.ಎಸ್ ಮುಖ್ಯಾಧಿಕಾರಿ-2 ಹುದ್ದೆಗೆ ಸ್ಥಳ ನಿಯುಕ್ತಿ ಆದೇಶ ನೀಡಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ನಅಇ 62 ಇಎಂಸಿ 2003, ದಿನಾಂಕ: 28-4-2005.**

ಕರ್ನಾಟಕ ಮುನಿಸಿಪಾಸಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಕೆಎಂಎಸ್ ಸೇವೆಗೆ ವಿಲೀನಗೊಳಿಸಿ ಸರ್ಕಾರಿ ಅಧಿಕಾರಿಗಳೆಂದು ಆದೇಶಿಸಿರುವ ಪುರಸಭಾ ನೌಕರರ ಪಟ್ಟಿ.

| ಕ್ರಮ ಸಂಖ್ಯೆ | ನೌಕರರ ವೃಂದ ಮತ್ತು ಹೆಸರು | ಜೇಷ್ಠತೆಯ ಸಂಖ್ಯೆ | ಕ್ರಮ ಸಂಖ್ಯೆ | ನೌಕರರ ವೃಂದ ಮತ್ತು ಹೆಸರು | ಜೇಷ್ಠತೆಯ ಸಂಖ್ಯೆ |
|---|---|---|---|---|---|
| | | **ವ್ಯವಸ್ಥಾಪಕರು** | | | |
| 1. | ಶ್ರೀ. ಹೆಚ್.ರುದ್ರಪ್ಪ | 11 | 8. | ಶ್ರೀ.ಶಾಂತ ಶೆಟ್ಟಿ | 77 |
| 2. | ಶ್ರೀ.ಬಿ.ನಾಗೇಂದ್ರಪ್ಪ | 24 | 9. | ಶ್ರೀ.ಆರ್.ಶ್ರೀಪಾದ | 78 |
| 3. | ಶ್ರೀ.ಪಿ.ಚನ್ನಯ್ಯ | 52 | 10. | ಶ್ರೀ.ಮಹ್ಮದ್ ಮುನೀರ್ | 79 |
| 4. | ಶ್ರೀ.ಆರ್.ಬಾಬು | 67 | 11. | ಶ್ರೀ.ಚಂದ್ರಶೇಖರ್ | 81 |
| 5. | ಶ್ರೀ.ಎಸ್.ಈಶ್ವರಯ್ಯ | 70 | 12. | ಶ್ರೀ.ಚಿಕ್ಕನಂಜಯ್ಯ | 82 |
| 6. | ಶ್ರೀ.ವಿ.ರಮೇಶ | 72 | 13. | ಶ್ರೀ.ಎಂ.ಎ.ಬಾಲಚಂದ್ರ | 83 |
| 7. | ಶ್ರೀ.ಹೆಚ್.ಎಂ.ರೇಣುಕಾಂಬ | 75 | 14. | ಶ್ರೀ.ಎಫ್.ಟಿ.ಶಂಕರಪ್ಪ | 84 |
| | | **ಕಂದಾಯಾಧಿಕಾರಿಗಳು** | | | |
| 1. | ಶ್ರೀ.ಪಿ.ನಾಗರಾಜು | 23 | 10. | ಶ್ರೀ.ಜಿತೇಂದ್ರ | 43 |
| 2. | ಶ್ರೀ.ಆರ್.ನಾಗರಾಜು | 24 | 11. | ಶ್ರೀ.ಜಿ.ಹನುಮಂತಪ್ಪ | 50 |
| 3. | ಶ್ರೀ.ಎಲ್.ಮರಿಯಪ್ಪ | 28 | 12. | ಶ್ರೀ.ಎಂ.ಬಿ.ನಡುವಿನಮನಿ | 51 |
| 4. | ಶ್ರೀ.ಸಿ.ಎಸ್.ರಮೇಶ್ | 33 | 13. | ಶ್ರೀ.ಎ.ಡಿ.ಮನಗೂಳಿ | 52 |
| 5. | ಶ್ರೀ.ಕೊಪ್ರೇಶಾಚಾರ್ | 34 | 14. | ಶ್ರೀ.ಜೆ.ಡಿ.ಗುದಿಗೆವರ್ | 54 |
| 6. | ಶ್ರೀ.ನಾಸಿರ್ ಅಲಿ | 35 | 15. | ಶ್ರೀ.ಜಿ.ಸುಬ್ಬರಾವ್ | 59 |
| 7. | ಶ್ರೀ.ಎಸ್.ನಾರಾಯಣಪ್ಪ | 38 | 16. | ಶ್ರೀ.ಟಿ.ರಾಮೇಗೌಡ | 60 |
| 8. | ಶ್ರೀ.ಮಲ್ಲಿಕಾರ್ಜುನ್ | 40 | 17. | ಶ್ರೀ.ಡೇವಿಡ್ | 61 |
| 9. | ಶ್ರೀ.ಕೆ.ಭೀಮಪ್ಪ | 42 | | | |
| | | **ಹಿರಿಯ ಆರೋಗ್ಯ ನಿರೀಕ್ಷಕರು** | | | |
| 1. | ಶ್ರೀ.ಖಾಜಾಮೊಹಿನುದ್ದೀನ್ | 90 | 7. | ಶ್ರೀ.ಎಸ್.ಕೆ.ಮಲ್ಲಾಪುರ | 123 |
| 2. | ಶ್ರೀ.ಹನುಮಾನಾಯಕ್ | 100 | 8. | ಶ್ರೀ.ಅಲ್ಫೋನ್ಸ್ ಬಾಲು | 124 |
| 3. | ಶ್ರೀ.ವಿ.ಎಸ್.ಹಿರೇಮಠ | 106 | 9. | ಶ್ರೀ.ಪಿ.ರಾಮಸ್ವಾಮಿ | 125 |
| 4. | ಶ್ರೀ.ಮಹ್ಮದ್ ಅರೀಫುದ್ದೀನ್ | 110 | 10. | ಶ್ರೀ.ಮಹದೇವ | 128 |
| 5. | ಶ್ರೀ.ಶಿವರಾಮ ಗಾಣಿಗ | 117 | 11. | ಶ್ರೀ.ಜತ್ತಣ್ಣ | 129 |
| 6. | ಶ್ರೀ.ಎಲ್.ಮಂಜುನಾಥಸ್ವಾಮಿ | 119 | 12. | ಶ್ರೀ.ಚನ್ನೇಗೌಡ | 130 |

**ಜಿ. ರಾಘವೇಂದ್ರಾಚಾರ್**

ಪಿ.ಆರ್. 621 ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject:** Diversion of 9.15 ha of forest land for setting up of wind Farm in Joggimatti R.F. Sy.No.26 of Chitradurga Village in favour of M/s ARC Power Generation Private Ltd. amendment of Government Order for the change of name-reg.

**Read:** 1. G.O.No. FEE 112 FGL 2000, dated: 4.12.2004.

2. Letter No. A5(5) GFL. Wind. ARC.CR-4/2000-01 of the Principal Chief Conservator of Forests, Bangalore.

**PREAMBLE:**

In the Government Order dated: 4.12.2004 read at (1) above Government accorded sanction under Section 2 of Forest (Conservation) Act, 1980 for diversion of 9.15 ha. of forest land for setting up of Wind Farm in Joggimatti R.F. Sy.No.26 of Chitradurga Village in favour of M/s ARC Power Generation Private Ltd. subject to certain conditions.

The Principal Chief Conservator of Forests, Bangalore in his letter read at (2) above has informed that, M/s ARC Power Generation Private Ltd., has been converted in to ARC Power Generation Ltd., on June 13th 2001 and furnished the copy of the certificate of incorporation consequent on change of name. Energy Department has also issued Corrigendum to this effect on 14.3.2005. The User Agency has requested to make necessary amendments by incorporating their company's name as ARC Power Generation Limited. Principal Chief Conservator of Forests, Bangalore has requested to issue

corrigendum for G.O. read at (1) above by incorporating the changed name of the Company as suggested.

The proposal has been examined in detail and hence the order.

**GOVERNMENT ORDER No. FEE 90 FLL 2005, Bangalore, Dated: 3rd May 2005**

In the Circumstances explained in the preamble above, in the sanction accorded in Government Order No. FEE 112 FGL 2000 dated: 4.12.2004 the words "M/s ARC Power Generation Private Ltd.," shall be substituted and read as "M/s ARC Power Generation Limited".

By Order and in the Name of the Governor of Karnataka,

**S.R. VATSALA**

P.R. 641

Under Secretary to Government,

Forest, Ecology and Environment Department.

**Subject:** Diversion of 98.224 ha. of addl. forest land for renewal of M.L.No.2002 in favour of M/s Mysore Minerals Ltd., Thimmappanagudi, Sandur Taluk in Bellary District, Karnataka.

**Read:**
1) Letter No.A5(1)MNG.CR.20/99-2000, dated: 5-1-2000 of Principal Chief Conservator of Forests.
2) Government of India,Ministry of Environment and Forests, New Delhi letter No. F.No. 8-28/2000-FC, dated: 18.4.01.
3) State Govt. Order No.FEE 91 FFM 97, dated: 8.6.01.
4) Letter No. A5(1) MNG.CR. 26/99-2000, dated 14-10-2004 of the Principal Chief Conservator of Forests, Bangalore.
5) State Government letter No.FEE 91 FFM 97,dated 26/02/2000 and 01/04/03.
6) State Government letter No.FEE 10 FFM 2003, dated 15/10/2004.
7) Government of India Ministry of Environment and Forests, New Delhi letter No.F.No.8-28/2000-FC(Pt) dated 25/07/03 and 5/8-11-2004.

**PREAMBLE:**

The Principal Chief Conservator of Forests had sent proposal vide his letter dated 5-1-2000 read at (1) above for Renewal of M.L.No.2002 over an area of 295.00 of forest land in Thimmappanagundi Village, Sanmdur Taluk in Bellary District in favour of M/s Mysore Minerals Ltd.,Thimmappanagudi, Sandur Taluk under section 2 of Forest (Conservation) Act, 1980 subject to certain conditions.

2) The proposal of the Principal Chief Conservator of Forest was recommended to Government of India, Ministry of Environment and Forests, New Delhi vide Government letter dated 26/02/2000 read at (5) above seeking prior approval of Government of India under section 2 of Forest (Conservation) Act, 1980.

3) After careful consideration of the proposal of the State Government/ Government of India vide its letter No.8.28/2000-FC, dated: 18.4.01 read at (2) above has agreed for diversion of 78.50 ha. of forest land for renewal of M.L.of 2002.

4) Government of Karnataka vide its G.O.No.FEE 91 FFM 97, dated: 8.6.01 read(3) above has approved for diversion of 78.50 ha. of forest land for renewal of M.L.No.2002 in favour of M/s Mysore Minerals Ltd., in Thimmappanagudi Village of Sandur Taluk.

5) The Government of India vide its letter dated 25-07-2003 read at (7) above has agreed in-principle for renewal of M.L.No.2002 over an area of 98.224 ha. of addl.forest land in Block E in Bellary District in favour of M/s Mysore Minerals Ltd.,Thimmappanagudi, Sandur Taluk subject to the fulfilment of certain conditions.

6) In compliance of the conditions stipulated by Government of India vide its letter dated 25-07-2003, the compliance report was forwarded to Government of India vide State Government letter dated 15/10/2004 read at (7) above.

7) Finally Government of India vide its letter dated 5/8-11-2004 read at (5) above has conveyed its general approval under Section 2 of Forest (Conservation) Act, 1980 for diversion of 98.224 ha. of addl. forest land in Block E in Bellary District in favour of M/s Mysore Minerals Ltd., subject to the fulfilment of certain conditions. Hence this order.

**GOVT. ORDER NO:FEE 10 FFM 2003, BANGALORE, DATED: 2nd May 2005**

After examining all aspects of the matter and in view of the approval accorded to the proposal by Government of India, Ministry of Environment and Forests, New Delhi, Government are pleased to accord

its approval for diversion of 98.224 ha. of addl.forest land in Block E in Bellary District for renewal of mining lease No.2002 in favour of M/s Mysore Minerals Ltd.,in Thimmappanagudi, Sandur Taluk subject to the following conditions.

1. Legal status of forest land shall remain unchanged.
2. Compensatory Afforestation shall be raised and maintained over equivalent non-forest land at the project cost.
3. The non-forest land for compensatory afforestation shall be notified by the State Government as RF under section – 4 or PF under section –29 of the Indian Forest Act, 1927 or the State Forest Act within a period of 6 months and Nodal Officer (Forest Conservation) shall report the compliance.
4. Demarcation of the area will be done on ground at project cost using four feet high RCC pillars. The pillars shall indicate serial numbers, forward and back bearing ;and distance between adjacent pillars.
5. Safety Zone and the enrichment plantations shall be raised, maintained and protected by the State Department at the project cost.
6. All the funds obtained as Net Present Value of diverted forest land should be deposited with Compensatory Afforestation Fund Management of Planning Authority(CAMPA).
7. The 10 ha. area being utilized for approach road shall not be allowed to be used for mining purposes. Nodal Officer will submit a report within a period of 15 days in this regard to the Regional Office, Bangalore.
8. The user agency shall protect the top soil at the project cost.
9. Mining shall be done as per the mining plan approved by the IBM
10. The calender plan for reclamation of the surrendered area, submitted by the user agency shall be strictly followed and will be subjected to the monitoring by the Regional Office,Bangalore.
11. Reclamation plan shall be executed by the user agency from the very first year of mining and an annual report shall be sent to the Nodal Officer and the Regional CCF,Bangalore.
12. Temporary crushing and screening plant shall be allowed tobe installed by the user agency in accordance with the guidelines issued by the Central Government.
13. Trees shall be felled only when it becomes necessary and under strict supervision of State Forest Department. No trees shall be felled, without permission. The lessee shall not cut any trees without prior permission of the Forest Dept. and all produce of permitted felling shall be handed over to Forest Dept. under cover of receipt. Transportation of ore should be strictly as per transit rules in force.
14. No labour camps shall be established on the forest land.
15. Sufficient firewood shall be provided by the User agency to the labourers at the project cost after purchase from the State Forest Department/Forest Development Corporation. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
16. The User Agency shall ensure that there is no damage to the wildlife.
17. The lease period shall be co-terminus with the current lease granted under MMRD Act 1957.
18. The lessee has to pay the N.P.V. fixed by the Government Notification No.FEE 247 FGL 02, dated: 17.1.04.
19. The Forest land shall not be used for any purpose other than that specified in the proposal.
20. The lessee shall pay usual lease rent and supervision charges as prescribed by the Government from time to time.
21. The lessee shall deposit the amount at prevailing rate towards raising of compensatory afforestation over 98.224 ha. in non-forest land.
22. The lessee shall undertake the afforestation measures in the proposed vacant area of the leased area.
23. The lessee shall carryout soil and water conservation measures and other necessary measures as advised by the Forest Department.
24. The lessee shall undertake to protect rigidly the leased area and forest area surrounding the area up to one Km. from the leased area.

25. The lessee shall execute an agreement with the Forest Dept. binding himself to abide by all usual conditions and terms as per orders of the Government of India and Government of Karnataka as well as Principal Chief Conservator of Forests.
26. The lessee shall take-up the planting work on the static dumps during the advance mining operations.
27. In case of violation of agreement conditions Forest Department shall have right to suspend the mining activities.
28. Lessee has to pay extraction cost if any to Department for felling of trees in the fresh leased area.
29. The period of lease shall be coterminus with the period as indicated in Government of India approval letter No.8-28/2000-FC, dated: 8.4.2001.
30. Any other condition that the State Government or the Chief Conservator of Forests (Central), Regional Office, Bangalore may impose from time to time for the protection to improvement of flora and fauna in the forest area in the interest of conservation, protection and development of forests.

By Order and in the Name of the Governor of Karnataka,

**S.R. VATSALA**

P.R. 644

Under Secretary to Government,
Forest, Ecology and Environment Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಮ.ಖಾ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಗೆ ವೇತನ ರಹಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ:** 1. ಶ್ರೀ ಮ.ಖಾ. ಮದಿಹಳ್ಳಿ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಅರ್ಜಿ ದಿನಾಂಕ: 13.2.2003.
2. ಹಿಂಬರಹ ದಿನಾಂಕ: 27.2.2003, 13.5.2003, 27.8.2003, 7.11.2003, 8.12.2003, 16.12.2003, 7.4.2004.

**ಪ್ರಸ್ತಾವನೆ:**

ಶ್ರೀ ಮ.ಖಾ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ ಇವರು ಮೇಲೆ ಓದಲಾದ ದಿನಾಂಕ: 13.2.2003ರ ಅವರ ಅರ್ಜಿಯಲ್ಲಿ ನರ ದೌರ್ಬಲ್ಯದಿಂದ ಬಳಲುತ್ತಿದ್ದು, ವೈದ್ಯಕೀಯ ಕಾರಣದ ಮೇಲೆ ದಿನಾಂಕ: 6.2.2003 ರಿಂದ 19.2.2003 ರವರೆಗೆ 14 ದಿನಗಳು ಪರಿವರ್ತಿತ ರಜೆ ಮಂಜೂರು ಮಾಡುವಂತೆ ಕೋರಿರುವರು.

ಮೇಲೆ ಓದಲಾದ ದಿನಾಂಕ: 27.2.2003ರ ಹಿಂಬರಹದಲ್ಲಿ ಇವರಿಗೆ ದಿನಾಂಕ: 6.2.2003 ರಿಂದ 19.2.2003 ರವರೆಗೆ ವೈದ್ಯಕೀಯ ಕಾರಣದ ಮೇಲೆ 14 ದಿನಗಳ ಪರಿವರ್ತಿತ ರಜೆ ಮಂಜೂರು ಮಾಡಲು ವೈದ್ಯಕೀಯ : ದೇಹ ಅರ್ಹತಾ ಪ್ರಮಾಣ ಪತ್ರವನ್ನು ನೀಡುವಂತೆ ಕೋರಲಾಗಿತ್ತು. ನಂತರ ಕೋರಲಾದ ಮಾಹಿತಿ ಒದಗಿಸದೇ ಇದ್ದ ಕಾರಣ ಈ ಮಾಹಿತಿಯನ್ನು ನೀಡುವಂತೆ 6 ನೆನಪು ಪತ್ರಗಳನ್ನು ನೀಡಲಾಗಿದೆ.

ಆರು ನೆನಪು ಪತ್ರ ನೀಡಲಾಗಿದ್ದರೂ ಇವರು ಪರಿವರ್ತಿತ ರಜೆ ಮಂಜೂರಾತಿ ಬಗ್ಗೆ ವೈದ್ಯಕೀಯ : ದೇಹ ಅರ್ಹತಾ ಪ್ರಮಾಣ ಪತ್ರಗಳನ್ನು ಒದಗಿಸಿರುವುದಿಲ್ಲ. ಆದುದರಿಂದ ಇವರು ಕೋರಿರುವ ಪರಿವರ್ತಿತ ರಜೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ಅನುಸಾರ ವೇತನ ರಹಿತ ರಜೆ ಎಂದು ಪರಿಗಣಿಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 56 ಸಅರ 2003, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2005**

ಶ್ರೀ ಮ.ಖಾ. ಮದಿಹಳ್ಳಿ, ಸರ್ಕಾರದ ಉಪ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ಅನುಸಾರ ದಿನಾಂಕ: 6.2.2003 ರಿಂದ 19.2.2003 ರವರೆಗೆ 14 ದಿವಸಗಳ ವೇತನ ರಹಿತ ರಜೆ ಮಂಜೂರು ಮಾಡಲಾಗಿದೆ. ಹಾಗೂ ಈ ಅವಧಿಯನ್ನು ಸದರಿ ನಿಯಮದ ಅನುಸಾರ ಅವರ ಖಾತೆಯಲ್ಲಿ ಜಮೆ ಇರುವ 14 ದಿನಗಳು ಅರ್ಧ ವೇತನ ರಜೆಗೆ ಲೆಕ್ಕ ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 611

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ (ಕ್ರೋಢೀಕರಣ) ಶಾಖೆಗೆ ಸೃಜಿಸಿರುವ ಹುದ್ದೆಗಳ ಮುಂದುವರಿಕೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸಸಿವಿ 95, ದಿನಾಂಕ: 8.1.1996.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 35 ಸಸಿವಿ 96, ದಿನಾಂಕ: 25.1.1997.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 42 ಸಸಿವಿ 97, ದಿನಾಂಕ: 7.1.1998.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 31 ಸಸಿವಿ 99, ದಿನಾಂಕ: 10.8.1999.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2003, ದಿನಾಂಕ: 13.6.2003.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 1998, ದಿನಾಂಕ: 18.10.2001.

7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2004, ದಿನಾಂಕ: 6.5.2004.
8. ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 64 ಆಡಳಿತ 2004, ದಿನಾಂಕ: 21.2.2005.

**ಪ್ರಸ್ತಾವನೆ:**

1961 ರಿಂದ 1994 ರವರೆಗಿನ ಅಧಿನಿಯಮಗಳನ್ನು ಕ್ರೋಢೀಕರಿಸುವ ಉದ್ದೇಶದಿಂದ ಸಂಸದೀಯ ವ್ಯವಹಾರಗಳ ಮತ್ತು ಶಾಸನ ರಚನೆ ಇಲಾಖೆಯ (ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ) ಅಧೀನದಲ್ಲಿ, ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶದಲ್ಲಿ, ಕೆಳಕಂಡ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

| | | |
|---|---|---|
| 1. | ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 1 ಹುದ್ದೆ |
| 3. | ಬೆರಳಚ್ಚುಗಾರರು | 1 ಹುದ್ದೆ |

ಮೇಲ್ಕಂಡ ಹುದ್ದೆಗಳನ್ನು ಕ್ರಮ ಸಂಖ್ಯೆ (2) (3) ಹಾಗೂ (5)ರ ಸರ್ಕಾರದ ಆದೇಶಗಳಲ್ಲಿ ದಿನಾಂಕ: 31.3.2004 ರವರೆಗೆ ಮುಂದುವರೆಸಲಾಗಿದೆ.

ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 18.10.2001ರ ಸರ್ಕಾರದ ಆದೇಶದಲ್ಲಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಕ್ರೋಢೀಕರಣ ಶಾಖೆಯ ಒಂದು ಬೆರಳಚ್ಚುಗಾರ ಹುದ್ದೆಯನ್ನು ರದ್ದುಪಡಿಸಲಾಗಿರುತ್ತದೆ.

ಸಹಾಯಕ ಪ್ರಾರೂಪಕಾರರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಸಂಸದೀಯ ವ್ಯವಹಾರ ಮತ್ತು ಶಾಸನ ರಚನೆ ಇಲಾಖೆ ಇವರು ಕ್ರಮ ಸಂಖ್ಯೆ (8) ರಲ್ಲಿ ಓದಲಾದ ದಿನಾಂಕ: 21.2.2005ರ ಅನಧಿಕೃತ ಟಿಪ್ಪಣಿಯಲ್ಲಿ ಕ್ರೋಢೀಕರಣ ಶಾಖೆಯ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2004, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2005**

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ (ಹಿಂದಿನ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಇಲಾಖೆ) ಕ್ರೋಢೀಕರಣ ಶಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಕೆಳಕಂಡ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ದಿನಾಂಕ: 31.3.2006 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 612

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ದಿವಂಗತ ಶ್ರೀ ಡಿ. ದೇವರಾಜ ಅರಸುರವರ ಪ್ರತಿಮೆಯನ್ನು ತಯಾರಿಸಲು ಮೆ: ವಾಗ್‌ಸ್ಕಲ್ಚರ್‍ಸ್, ಮುಂಬೈ ಇವರೊಡನೆ ಮಾಡಿಕೊಂಡಿರುವ ಕರಾರು ಒಪ್ಪಂದದ ಅವಧಿಯನ್ನು ವಿಸ್ತರಿಸುವ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಕಇ 383 ಬಿಎಂಎಸ್ 2003, ದಿನಾಂಕ: 24.11.2003.
2. ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಹಿಂವನಿ:ಸ-2:ಸಿಆರ್-22:2004-05, ದಿನಾಂಕ: 5.3.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಆಯುಕ್ತರು ಹಿಂದುಳಿದ ವರ್ಗಗಳ ಇಲಾಖೆ ಬೆಂಗಳೂರು ಇವರಿಗೆ ಮೆ: ವಾಗ್‌ಸ್ಕಲ್ಪ್‌ರ್ಸ್, ಮುಂಬೈ ಇವರೊಡನೆ ದೇವರಾಜ ಅರಸು ಪ್ರತಿಮೆ ಸಿದ್ಧಪಡಿಸಲು ಅಗತ್ಯ ಒಪ್ಪಂದ ಮಾಡಿಕೊಳ್ಳಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆ ಸಲ್ಲಿಸಿ ದೇವರಾಜು ಅರಸುರವರ ಹೊಸ ಪ್ರತಿಮೆಯನ್ನು ಸಿದ್ದಪಡಿಸುವ ಬಗ್ಗೆ, ಮೆಸರ್ಸ್ ವಾಗ್‌ಸ್ಕಲ್ಪ್‌ರ್ಸ್, ಮುಂಬೈ ಇವರೊಂದಿಗೆ ದಿನಾಂಕ: 29.01.2004 ರಲ್ಲಿ ಮಾಡಿಕೊಳ್ಳಲಾದ ಕರಾರು ಒಪ್ಪಂದದ ಪ್ರಕಾರ ದಿನಾಂಕ: 31.07.2004ಕ್ಕೆ ಪ್ರತಿಮೆಯನ್ನು ಸಿದ್ದಪಡಿಸಿ ಸರಬರಾಜು ಮಾಡಬೇಕಾಗಿತ್ತು. ಆದರೆ ಶಿಲ್ಪಿಯವರು ಸಿದ್ದಪಡಿಸಬೇಕಾಗಿದ್ದ ಪ್ಲಾಸ್ಟರ್ ಆಫ್ ಪ್ಯಾರೀಸ್ ಪ್ರತಿಮೆಯನ್ನು ವೀಕ್ಷಿಸಿ ಅಂತಿಮ ಅನುಮೋದನೆಯನ್ನು ನೀಡುವಲ್ಲಿ ರಾಜ್ಯದಲ್ಲಿ ಚುನಾವಣೆ ಪ್ರಕ್ರಿಯೆಯಿಂದ ಸಮಾಜ ಕಲ್ಯಾಣ ಸಚಿವರ ನೇಮಕಾತಿ ಸಮಿತಿಯ ಪುನರ್ರಚನೆ ಇತ್ಯಾದಿಗಳಿಂದಾಗಿ ಮುಂಬೈ ಪ್ರಯಾಣ ಬೆಳೆಸಿ ಅಂತಿಮ ಅನುಮೋದನೆ ನೀಡುವಲ್ಲಿ ವಿಳಂಬವಾಗಿದ್ದು ದಿನಾಂಕ: 7.1.2005 ರಲ್ಲಿ ಮಾದರಿ ಪ್ರತಿಮೆಯನ್ನು ವೀಕ್ಷಿಸಿ ಅಂತಿಮ ಅನುಮೋದನೆ ನೀಡಿ ದಿನಾಂಕ: 30.6.2005 ರೊಳಗೆ ಕಂಚಿನ ಪ್ರತಿಮೆಯನ್ನು ಸಿದ್ದಪಡಿಸಿ ಸರಬರಾಜು ಮಾಡಲು ಶಿಲ್ಪಿಗಾರರಿಗೆ ತಿಳಿಸಲಾಗಿದೆ.

ಆದ್ದರಿಂದ ಈ ಕಾರಣಗಳಿಂದಾಗಿ ಮೊದಲು ಮಾಡಿಕೊಂಡಿರುವ ಕರಾರು ಒಪ್ಪಂದದ ದಿನಾಂಕ: 31.7.2004ರ ಬದಲಾಗಿ ಅವಧಿಯನ್ನು 30.6.2005ಕ್ಕೆ ವಿಸ್ತರಿಸಿ ಕರಾರು ಒಪ್ಪಂದವನ್ನು ತಿದ್ದುಪಡಿ ಮಾಡಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 383 ಬಿಎಂಎಸ್ 2003, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ದೇವರಾಜು ಅರಸುರವರ ಪ್ರತಿಮೆಯನ್ನು ಸಿದ್ದಪಡಿಸಿ ಒದಗಿಸಲು ಮೆಸರ್ಸ್ ವಾಗ್‌ಸ್ಕಲ್ಪರ್ಸ್ ಇವರೊಡನೆ ದಿನಾಂಕ: 29.1.2004ರ ಕರಾರಿನಲ್ಲಿ ನಮೂದಿಸಿದ ದಿನಾಂಕ: 31.7.2004ರ ಅಂತಿಮ ಅವಧಿಯನ್ನು ದಿನಾಂಕ: 30.6.2005 ರವರೆಗೆ ವಿಸ್ತರಿಸಿ ಆದೇಶಿಸಿದೆ. ಈ ಕಾಲಾವಧಿ ವಿಸ್ತರಣೆಯು ಹೆಚ್ಚಿನ ಆರ್ಥಿಕ ಹೊರೆಯಾಗಬಾರದೆಂಬ ನಿಬಂಧನೆಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಪ್ರಾಣದೇವ**

ಪಿ.ಆರ್. 613 ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಹಿಂದಿನ ಕಾರ್ಯದರ್ಶಿಗಳು ಶ್ರೀ ಯಡಿಯೂರು ಸಿದ್ದಲಿಂಗೇಶ್ವರ ದೇವಸ್ಥಾನ ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು, ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ, ಇವರ ಮೇಲಿನ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 35 ಮುಸೇವಿ 2002 ದಿನಾಂಕ: 10.07.2003.
2. ದಿನಾಂಕ: 31.01.2005ರ ವಿಚಾರಣಾಧಿಕಾರಿಗಳ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ, ಸಮೂಹ-ಎ (ಕಿರಿಯ ಶ್ರೇಣಿ) ಅಧಿಕಾರಿ (ನಿವೃತ್ತ) ಇವರು ಈ ಹಿಂದೆ ಕಾರ್ಯದರ್ಶಿ ಶ್ರೀ ಸಿದ್ದಲಿಂಗೇಶ್ವರ ದೇವಸ್ಥಾನ ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳು, ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ, ಸುಬ್ರಹ್ಮಣ್ಯ, ಸುಳ್ಯ ತಾಲ್ಲೂಕು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಈ ಕೆಳಕಂಡ ಆರೋಪಗಳಿಗೆ ಗುರಿಯಾಗಿದ್ದರು. ಆರೋಪಗಳ ಸಂಕ್ಷಿಪ್ತ ವಿವರಗಳು ಕೆಳಕಂಡಂತಿದೆ:-

1) ಶ್ರೀ ಸಿದ್ದಲಿಂಗೇಶ್ವರಸ್ವಾಮಿ ದೇವಸ್ಥಾನದ ಫರ್ನಿಚರ್ಸ್ ಖರೀದಿ ವಿಚಾರವು ವ್ಯವಸ್ಥಾಪನಾ ಸಮಿತಿಯ ಮುಂದೆ ಅಂತಿಮ ತೀರ್ಮಾನವಾಗುವ ಮೊದಲೇ ಹಿಂದಿನ ಕಾರ್ಯದರ್ಶಿಗಳು ಅವ್ಯವಹಾರ ಎಸಗಿರುತ್ತಾರೆಂದು ಧಾರ್ಮಿಕ ದತ್ತಿ ಆಯುಕ್ತರಿಗೆ ದಿನಾಂಕ: 15.12.2000 ರಲ್ಲಿ ಪತ್ರ ಮುಖಾಂತರ ವರದಿ ಮಾಡಿರುವ ವಿಚಾರವು ಸಮಿತಿಯ ಗಮನಕ್ಕೆ ಬಂದು ತೀವ್ರವಾಗಿ ಆಕ್ಷೇಪಿತವಾಗಿ ಸದರಿಯವರು ಕ್ಷಮೆ ಕೇಳುವ ಹಂತಕ್ಕೆ ವಿವಾದ ಉಂಟುಮಾಡಿರುವುದು.
2) ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಾಲಯದ 40 ಕೆ.ಜಿ. ಬೆಳ್ಳಿ ಸ್ಥಳಾಂತರಗೊಳ್ಳಲು ಕಾರಣರಾಗಿರುವುದು.
3) ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ ನೌಕರರಾದ ಕಟ್ಟಿಗೆ ಹುದ್ದೆಯ ಶ್ರೀ ರಾಮಮೂರ್ತಿ, ಹೆಬ್ಬಾರರ ಹುದ್ದೆಯ ಶ್ರೀ ಶಿವಪ್ರಸಾದ್ ಇವರುಗಳನ್ನು ಧಾರ್ಮಿಕ ದತ್ತಿ ಆಯುಕ್ತರ ದಿನಾಂಕ: 23.08.2000ರ ನಿರ್ದೇಶನವನ್ನು ಉಲ್ಲಂಘಿಸಿ, ವರ್ಗಾವಣೆ ಮಾಡಿ, ಪ್ರಕರಣ ನ್ಯಾಯಾಲಯದಲ್ಲಿ ಪ್ರಶ್ನಿತವಾಗಲು ಕಾರಣರಾಗಿರುವುದು.
4) ಸದರಿ ಅಧಿಕಾರಿಯವರು ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ ಗರ್ಭಗುಡಿ ನವೀಕರಣದ ವಿಚಾರದಲ್ಲಿ ಕರೆಯಲಾಗಿದ್ದ ಟೆಂಡರ್ ಪ್ರಕಟಣೆ ಬಗ್ಗೆ ಯಥಾಸ್ಥಿತಿ ಕಾಪಾಡಲು ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ ರಿವಿಜನ್ ಅರ್ಜಿ ಸಂಖ್ಯೆ: 104/2001 ದಿನಾಂಕ: 24.08.2001 ರಲ್ಲಿ ನೀಡಿರುವ ನಿರ್ದೇಶನದ ಮಾಹಿತಿಯು ತಿಳಿದಿದ್ದರೂ ಟೆಂಡರ್ ಕರೆದು ಕರ್ತವ್ಯ ಲೋಪ ಎಸಗಿರುವುದು.
5) ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಾಲಯದ ಹಣ್ಣು ಕಾಯಿ ಅಂಗಡಿ ಮತ್ತು ಚಿನ್ನ ಬೆಳ್ಳಿ ಅಂಗಡಿಗಳ ವ್ಯಾಪಾರದ ಹಕ್ಕನ್ನು ಬಹಿರಂಗ ಎಲಂನಲ್ಲಿ ವಹಿಸುವ ಬಗ್ಗೆ ದಿನಾಂಕ: 07.01.2001ರ ಧಾರ್ಮಿಕ ದತ್ತಿ ಆಯುಕ್ತರ ಆದೇಶವನ್ನು ಉಲ್ಲಂಘಿಸಿ ದೇವಾಲಯಕ್ಕೆ ರೂ.4,18,334.00 ಗಳಷ್ಟು ನಷ್ಟವಾಗಿರುವುದಕ್ಕೆ ಕಾರಣರಾಗಿರುವುದು.

ಆರೋಪದ ಬಗ್ಗೆ ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ರವರಿಗೆ ದೋಷಾರೋಪಣೆ ಪಟ್ಟಿ ಜಾರಿ ಮಾಡಲಾಗಿತ್ತು. ಸದರಿಯವರು ನೀಡಿದ ಲಿಖಿತ ಸಮಜಾಯಿಷಿ ಹೇಳಿಕೆಯನ್ನು ಪರಿಶೀಲಿಸಿ, ಈ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ನಿರ್ಧರಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ವಿಚಾರಣಾಧಿಕಾರಿಗಳನ್ನು ನೇಮಕ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನಂತೆ ವಿಚಾರಣಾಧಿಕಾರಿಗಳು ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಸಮೂಹ-ಎ (ಕಿರಿಯ ಶ್ರೇಣಿ) ಅಧಿಕಾರಿ ರವರ ಮೇಲೆ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆಪಾದಿತರ ಹೇಳಿಕೆ ಇಲಾಖಾ ಸಾಕ್ಷಿಗಳ ಹೇಳಿಕೆ ಹಾಗೂ ಮಂಡನಾಧಿಕಾರಿಯವರ ವಾದ / ಹೇಳಿಕೆಯನ್ನು ವಿಚಾರಣಾಧಿಕಾರಿಗಳು ಪರಿಶೀಲಿಸಿರುತ್ತಾರೆ.

ಶಿಸ್ತು ಪ್ರಾಧಿಕಾರಿ ಪರ ಸಾಕ್ಷಿ ನುಡಿದಿರುವ ಸಾಕ್ಷಿದಾರರು ಆಪಾದಿತರ ಮೇಲಿನ ಆರೋಪಗಳನ್ನು ಸಾಬೀತುಪಡಿಸುವಂತಹ ಸಾಕ್ಷ ನುಡಿದಿರುವುದಿಲ್ಲ. ಶ್ರೀ ಸಿದ್ದಲಿಂಗೇಶ್ವರಸ್ವಾಮಿ ದೇವಸ್ಥಾನದ ಪೀಠೋಪಕರಣ ಖರೀದಿ ಸಂಬಂಧ ಆಪಾದಿತರು ಆಯುಕ್ತರಿಗೆ ಪತ್ರವನ್ನು ಯಾವುದೇ ದುರುದ್ದೇಶದಿಂದ ಬರೆದಿಲ್ಲವೆಂದು ಸಾಕ್ಷಿದಾರರು ಸಾಕ್ಷ ನುಡಿದಿರುತ್ತಾರೆ. ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ 40 ಕೆ.ಜಿ. ಬೆಳ್ಳಿ ಸ್ಥಳಾಂತರದ ಬಗ್ಗೆ 4 ಜನ ಸಾಕ್ಷಿದಾರರು ಆಪಾದನೆ ಬಗ್ಗೆ ಒಂದು ಮಾತನ್ನು ಸಹ ಹೇಳಿರುವುದಿಲ್ಲ ಹಾಗೂ ಆ ಬಗ್ಗೆ ದಾಖಲೆ ಇಲ್ಲ. ನೌಕರರನ್ನು ವರ್ಗಾವಣೆ ಮಾಡುವ ಅಧಿಕಾರ ಆಪಾದಿತರಿಗೆ ಇರುತ್ತದೆ ಎಂದು ಸಾಕ್ಷಿದಾರರು ನುಡಿದಿರುತ್ತಾರೆ.

ದೇವಾಲಯದ ನವೀಕರಣಕ್ಕೆ ಟೆಂಡರ್ ತೆರೆದ ಆರೋಪಕ್ಕೆ ಸಂಬಂಧಿಸಿದಂತೆ ಆಡಳಿತ ಮಂಡಳಿಯ ಸದಸ್ಯರ ಮತ್ತು ಟೆಂಡರ್ ಸಲ್ಲಿಸಿದ್ದವರ ಸಮ್ಮುಖದಲ್ಲಿ ಟೆಂಡರ್‌ನ್ನು ತೆರೆದು ಠರಾವು ಮಾಡುವ ಪೂರ್ವದಲ್ಲಿ ಟೆಂಡರ್‌ಗೆ ತಡೆಯಾಜ್ಞೆ ಆಗಿದೆ ಎಂದು ತಂತಿ ಸಂದೇಶ ಬಂದಿದ್ದರಿಂದ ಟೆಂಡರ್ ತೆರೆಯಲಾಗಿದ್ದು, ಅದನ್ನು ಸ್ಥಿರೀಕರಿಸಿಲ್ಲ ಮತ್ತು ಯಥಾಸ್ಥಿತಿ ಕಾಯ್ದುಕೊಂಡು ಹೋಗಿರುವುದು ಸ್ಪಷ್ಟವಿರುತ್ತದೆ. ದೇವಾಲಯದ ಹಣ್ಣು ಕಾಯಿ, ಚಿನ್ನ-ಬೆಳ್ಳಿ ಅಂಗಡಿಯ ಬಾಬ್ತು ವ್ಯಾಪಾರ ನಡೆಸುವ ಹಕ್ಕಿಗೆ ಸಂಬಂಧಿಸಿದಂತೆ ನಷ್ಟದ ವಿವರಗಳು ಇರುವುದಿಲ್ಲ. ಹಾಗೂ ಸಂಪೂರ್ಣವಾಗಿ ಈ ಅಂಶಕ್ಕೆ ಯಾವ ಸಾಕ್ಷಿಯೂ ಇಲ್ಲ. ಈ 5 ಆರೋಪಗಳು ಯಾವುವೂ ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ನಿರ್ಣಯಿಸಿ, ವಿಚಾರಣಾ ವರದಿ ನೀಡಿರುತ್ತಾರೆ.

ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಆರೋಪಗಳು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಒಪ್ಪಿ ಆರೋಪಿತರನ್ನು ಆರೋಪದಿಂದ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 35 ಮುಸೇವಿ 2002, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಸಮೂಹ-ಎ (ಕಿರಿಯ ಶ್ರೇಣಿ) ನಿವೃತ್ತ ಅಧಿಕಾರಿ ಹಾಗೂ ಅಂದಿನ ಕಾರ್ಯದರ್ಶಿಗಳು, ಶ್ರೀ ಸಿದ್ದಲಿಂಗೇಶ್ವರಸ್ವಾಮಿ ದೇವಸ್ಥಾನ, ಯಡಿಯೂರು, ತುಮಕೂರು ಜಿಲ್ಲೆ ಹಾಗೂ ಕಾರ್ಯನಿರ್ವಾಹಕ ಅಧಿಕಾರಿ ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ, ಸುಬ್ರಹ್ಮಣ್ಯ, ಸುಳ್ಯ ತಾಲ್ಲೂಕು ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಿದ್ದು, ಆರೋಪ ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿ ಆರೋಪಿತರ ಮೇಲೆ ಹೊರಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಮೇಶ್ ಕೆ. ಜಾಗೀರ್‌ದಾರ್**

ಪಿ.ಆರ್. 614 ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## ಸಾರಿಗೆ ಸಚಿವಾಲಯ

**ವಿಷಯ:** ಸಾರಿಗೆ ಇಲಾಖೆಯಲ್ಲಿನ 26 ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನಾಗಿ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಸಾರಿಗೆ ಆಯುಕ್ತರ ಪತ್ರದ ಸಂಖ್ಯೆ: ಸಾಆಕ:ಸಿಬ್ಬಂದಿ-1:ಪಿಆರ್-6:98-99, ದಿನಾಂಕ: 27.11.2004ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಸಾರಿಗೆ ಆಯುಕ್ತರು 26 ಮೋಟಾರು ವಾಹನ ನಿರೀಕ್ಷಕರುಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗೆ ಉನ್ನತೀಕರಿಸುವ ಬಗ್ಗೆ ಕೋರಿದ್ದು ಸದರೀ ಉನ್ನತೀಕರಣ ಈ ಕೆಳಕಂಡ ಕಾರಣಗಳಿಂದ ಅವಶ್ಯಕವೆಂದು ತಿಳಿಸಿರುತ್ತಾರೆ.

ಸಾರಿಗೆ ಇಲಾಖೆಯಲ್ಲಿ ವಾಹನಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಿದ್ದು ಬೆಳವಣಿಗೆಯನ್ನು ಅವಲೋಕಿಸಿದಾಗ ಬೆಂಗಳೂರು ನಗರವೊಂದರಲ್ಲಿ 2000-01ನೇ ಸಾಲಿನಲ್ಲಿ 14,73000 ವಾಹನಗಳಿದ್ದು 2002-03ರ ಸಾರಿಗೆ 17,82694 ವಾಹನಗಳ ನೋಂದಣಿಯಾಗಿದ್ದು ಬೆಳವಣಿಗೆ ಶೇ.7.3 ರಿಂದ 12.3ಕ್ಕೆ ಏರಿರುತ್ತದೆ. ಹಾಗೆಯೇ ರಾಜ್ಯಮಟ್ಟದಲ್ಲಿ ವೀಕ್ಷಿಸಿದಾಗ 2000-01ನೇ ಸಾಲಿನಲ್ಲಿ 36,91,500 ವಾಹನಗಳಿದ್ದು 2002-03ರ ಸಾರಿಗೆ 44,61,105 ವಾಹನಗಳ ನೋಂದಣಿಯಾಗಿದ್ದು ಇದರಲ್ಲೂ ಸಹ ಶೇಕಡಾವಾರು 7.7 ರಿಂದ 12.2ಕ್ಕೆ ಏರಿಕೆಯಾಗಿರುತ್ತದೆ. ಅಲ್ಲದೇ, ರಾಜಸ್ವ ಸಂಗ್ರಹಣೆಯಲ್ಲಿ 2000-01 ರಲ್ಲಿ ರೂ.473.00 ಕೋಟಿಗಳಿದ್ದು 2002-03ಕ್ಕೆ ರೂ.667.00 ಕೋಟಿ ಸಂಗ್ರಹಣೆ ಆಗಿದ್ದು ಇದರಲ್ಲೂ ಸಹ ಬೆಳವಣಿಗೆ ಹೆಚ್ಚಾಗಿರುತ್ತದೆ.

ಸಾರಿಗೆ ಇಲಾಖೆಯಲ್ಲಿ ಕೆಲವು ಶಾಸನಬದ್ಧ ಕಾರ್ಯಗಳನ್ನು ವಾಹನಗಳ ಅರ್ಹತಾ ಪತ್ರ, ನವೀಕರಣಕ್ಕೆ ವಾಹನಗಳನ್ನು ತಪಾಸಿಸುವುದು, ಚಲನಾ ಪತ್ರಕ್ಕೆ ಅಭ್ಯರ್ಥಿಗಳನ್ನು ಪರೀಕ್ಷೆಗೊಳಪಡಿಸುವುದು, ಪ್ರವರ್ತನ ಕಾರ್ಯಗಳನ್ನು ನಡೆಸುವುದು, ಸಾರ್ವಜನಿಕರಿಗೆ ದಿನನಿತ್ಯ ಸ್ಪಂದಿಸಿ ಕಲಿಕಾ: ಖಾಯಂ ಚಾಲನಾ ಪತ್ರ, ನೋಂದಣಿಗೊಳಗಾದ ಹೊಸ ವಾಹನಗಳನ್ನು ಪರಿಶೀಲಿಸುವುದು, ವಾಯುಮಾಲಿನ್ಯ ತಪಾಸಣಾ ಕೇಂದ್ರ ಹಾಗೂ ಚಲನಾ ತರಬೇತಿ ಶಾಲೆಗಳನ್ನು ತಪಾಸಿಸುವುದು ಇವರ ಆದ್ಯ ಕರ್ತವ್ಯವಾಗಿರುತ್ತದೆ.

ಅಲ್ಲದೆ ತನಿಖಾ ಠಾಣೆಗಳಲ್ಲಿ ಪ್ರತಿದಿನ 24 ಗಂಟೆಗಳಲ್ಲಿ ಮೂರು ಪಾಳಿಗಳಲ್ಲಿ ಕಾರ್ಯನಿರ್ವಹಿಸಿ ಸರ್ಕಾರದ ಬೊಕ್ಕಸಕ್ಕೆ ಬರಬೇಕಾದ ರಾಜಸ್ವದ ವಸೂಲಾತಿಯನ್ನು ಸಕ್ರಮವಾಗಿ ನಿರ್ವಹಿಸಬೇಕಾಗಿರುವುದರಿಂದ ಹಿರಿಯ ಮೋಟಾರು ವಾಹನ ನಿರೀಕ್ಷಕರು : ತನಿಖಾಧಿಕಾರಿಗಳು ಸಾರಿಗೆ ಇಲಾಖೆಗೆ ಅನಿವಾರ್ಯವಾಗಿರುತ್ತದೆ. ಆದ್ದರಿಂದ 26 ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನು ಹಿರಿಯ ಮೋಟಾರು ವಾಹನ ನಿರೀಕ್ಷಕರ ಹುದ್ದೆಗೆ ಉನ್ನತೀಕರಿಸುವುದು ಸೂಕ್ತವೆಂದು ಹಾಗೂ ಸದರೀ ಉನ್ನತೀಕರಣದಿಂದ ಸರ್ಕಾರದ ಬೊಕ್ಕಸಕ್ಕೆ ಒಂದು ವಾರ್ಷಿಕ ವೇತನ ಬಡ್ತಿ ನೀಡುವುದನ್ನು ಹೊರತುಪಡಿಸಿ ಇನ್ನಿತರೆ ಯಾವುದೇ ಆರ್ಥಿಕ ಹೊರೆ ಸರ್ಕಾರಕ್ಕೆ ಇರುವುದಿಲ್ಲವೆಂದೂ ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.-

**ಸರ್ಕಾರಿ ಆದೇಶ ಸಂಖ್ಯೆ: ಸಾರಿಇ 6 ಸಾಇಸೆ 2005, ಬೆಂಗಳೂರು, ದಿನಾಂಕ: 26ನೇ ಏಪ್ರಿಲ್ 2005**

**ಯುನಿಕ್ ಸಂಖ್ಯೆ 112:2005**

ಮೇಲೆ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸಾರಿಗೆ ಇಲಾಖೆಯಲ್ಲಿರುವ ಮೋಟಾರು ವಾಹನ ನಿರೀಕ್ಷಕರುಗಳ ಪೈಕಿ 26 ಹುದ್ದೆಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.5575-10620 ರಲ್ಲಿ ಹಿರಿಯ ಮೋಟಾರು ವಾಹನ ನಿರೀಕ್ಷಕರುಗಳ ಹುದ್ದೆಗಳನ್ನಾಗಿ ಸಾರ್ವಜನಿಕರ ಹಿತದೃಷ್ಟಿಯಿಂದ ಉನ್ನತೀಕರಿಸಲಾಗಿದೆ. ಸೃಜಿಸಲು ಉದ್ದೇಶಿಸಿರುವ 26 ಹುದ್ದೆಗಳನ್ನು ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಉನ್ನತೀಕರಿಸುವ ಮೂಲಕ ಹಾಗೂ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅನುಸರಿಸಿ ತುಂಬಲಾಗುವುದು.

ಈ ಉನ್ನತೀಕರಣದಿಂದಾಗಿ ಮೋಟಾರು ವಾಹನ ನಿರೀಕ್ಷಕರುಗಳ ವೃಂದದಲ್ಲಿನ 26 ಹುದ್ದೆಗಳನ್ನು ಕಡಿತಗೊಳಿಸಲಾಗಿದ್ದು ಹೊಸ ಹುದ್ದೆಗಳನ್ನು ಸೃಜಿಸಲಾಗುವುದಿಲ್ಲ.

ಈ ಮೇಲ್ಕಂಡ ಹುದ್ದೆಗಳ ಉನ್ನತೀಕರಣ, ಸಾರಿಗೆ ಇಲಾಖೆಯ ಸಾಮರ್ಥ್ಯ ರಾಜಸ್ವವನ್ನು ಹೆಚ್ಚಿಸಿ ಸಾರ್ವಜನಿಕರಿಗೆ ಉತ್ತಮ ಸೇವೆ ಕಲ್ಪಿಸುವ ಸಲುವಾಗಿ ಹಾಗೂ ಶಾಸನ ಬದ್ಧ ಕಾರ್ಯಗಳನ್ನು ನಿರ್ವಹಿಸುವ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ: 6.4.2005ರ ಟಿಪ್ಪಣಿ ಸಂಖ್ಯೆ: ಆಇ 637 ವೆಚ್ಚ-6:2005 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ವಾಸುದೇವ**

ಪಿ.ಆರ್. 616 ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ.